ಕಾಯಕವೇ ಕೈಲಾಸ



# ಸಿದ್ಧಗಂಗಾ



ಸಂಪುಟ : ೫೩ ಮಾರ್ಚ್ ೨೦೧೭ ಸಂಚಿಕೆ : ೦೩



ತುಮಕೂರು ಸರ್ಕಾರಿ ಪದವಿಪೂರ್ವ ಕಾಲೇಜು ಮೈದಾನದಲ್ಲಿ ಆಯೋಜಿಸಲಾಗಿದ್ದ ಅತಿರುದ್ರ ಮಹಾಯಾಗಕ್ಕೆ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಜ್ಯೋತಿ ಬೆಳಗಿಸುವುದರ ಮೂಲಕ ಚಾಲನೆ ನೀಡಿ ಆಶೀರ್ವದಿಸಿದರು. ಈ ಸಂದರ್ಭದಲ್ಲಿ ಶ್ರೀಯುತರಾದ ವೆಂಕಟೇಶ್ ಲಾಡ್, ಜಿ.ಎಸ್. ಬಸವರಾಜು, ಟಿ.ಆರ್. ಆಂಜಿನಪ್ಪ, ಚಿದಾನಂದ್, ಡಾ. ಸಿ. ಸೋಮಶೇಖರ್, ಕೆ.ಪಿ. ಮೋಹನ್‌ರಾಜ್, ರಮೇಶ್‌ಬಾಬು ಮೊದಲಾದ ಗಣ್ಯರು ಉಪಸ್ಥಿತರಿದ್ದರು.



ಶ್ರೀಮಠದಲ್ಲಿ ಏರ್ಪಡಿಸಲಾಗಿದ್ದ ದಡಾರ-ರುಬೆಲ್ಲಾ ಲಸಿಕೆ ಅಭಿಯಾನಕ್ಕೆ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಚಾಲನೆ ನೀಡಿದರು. ಈ ಸಂದರ್ಭದಲ್ಲಿ ಜಿಲ್ಲಾ ಆರೋಗ್ಯ ಇಲಾಖೆಯ ವೈದ್ಯಾಧಿಕಾರಿಗಳು ಹಾಗೂ ಸಿಬ್ಬಂದಿ ವರ್ಗದವರು ಉಪಸ್ಥಿತರಿದ್ದರು.



ಗಣರಾಜ್ಯೋತ್ಸವದ ಸಂದರ್ಭದಲ್ಲಿ ನೀಡುವ ರಾಷ್ಟ್ರಪತಿ ಪದಕ ಪುರಸ್ಕೃತರಾದ ಹೆಚ್ಚುವರಿ ಪೋಲಿಸ್ ವರಿಷ್ಠಾಧಿಕಾರಿ ಶ್ರೀ ಮಂಜುನಾಥ್ ಅವರನ್ನು ತುಮಕೂರು ನಗರ ವೀರಶೈವ ಸಮಾಜದ ವತಿಯಿಂದ ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯ ಸಮ್ಮುಖದಲ್ಲಿ ಅಭಿನಂದಿಸಲಾಯಿತು.




ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಂಸ್ಥಾಪಕ ಅಧ್ಯಕ್ಷರು

ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು
ಉಪಾಧ್ಯಕ್ಷರು

ಸಂಪಾದಕರು :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕರು :
ಎಚ್.ಎಸ್. ಸಿದ್ಧಗಂಗಪ್ಪ

ಪತ್ರಿಕಾ ಕಾರ್ಯನಿರ್ವಹಣಾ ಸಮಿತಿ :
ಎಂ. ರೇಣುಕಾರಾಧ್ಯ
ಆರ್.ಎಸ್. ಮಲ್ಲೇಶಪ್ಪ
ಕೆ.ಬಿ. ಶಿವಶಂಕರಯ್ಯ
ಸಿ. ಕುಮಾರಸ್ವಾಮಿ

ಪ್ರಕಾಶನ :
ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು :
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್ ಮುದ್ರಣಾಲಯ
ಶ್ರೀ ಸಿದ್ಧಗಂಗಾ ಮಠ,
ತುಮಕೂರು-572 104.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572 104
ದೂ: 0816-2282322.


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೫೩ ಮಾರ್ಚ್ ೨೦೧೭ ಸಂಚಿಕೆ : ೦೩

## ಒಳಪುಟಗಳಲ್ಲಿ ..................




ಚಂದಾ ವಿವರ : ವಾರ್ಷಿಕ ಚಂದಾ ರೂ. 200/-
ಆಜೀವ ಸದಸ್ಯತ್ವ ರೂ. 1500/- ಬಿಡಿ ಪ್ರತಿ ರೂ. 12.00



## ಡಾಕ್ಟರೇಟ್ ಪದವಿಯ ನಿರಾಕರಣೆ

ಶ್ರೀಮಠದ ಅಧ್ಯಕ್ಷರಾಗಿರುವ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಗೆ ಅತ್ಯಂತ ಅಭಿಮಾನದಿಂದ, ಪ್ರೀತಿಯಿಂದ, ಗೌರವ ಪೂರ್ವಕವಾಗಿ ತುಮಕೂರು ವಿಶ್ವವಿದ್ಯಾಲಯ ಗೌರವ ಡಾಕ್ಟರೇಟ್ ಪದವಿಯನ್ನು ನೀಡಲು ಮುಂದೆ ಬಂದುದು ಸಂತೋಷವನ್ನು ತರುವಂಥದು. ಅದಕ್ಕಾಗಿ ವಿಶ್ವವಿದ್ಯಾಲಯದ ಕುಲಪತಿಗಳನ್ನು, ಕುಲಸಚಿವರನ್ನು, ಸಿಂಡಿಕೇಟ್, ಸೆನೆಟ್ ಸದಸ್ಯರನ್ನು 'ಸಿದ್ಧಗಂಗಾ' ಅಭಿನಂದಿಸುತ್ತದೆ.

ಆದರೆ,

ನಾವು ಮಾಡಿರುವ ಸಾಧನೆ ಅಲ್ಪ, ಮಾಡಬೇಕಾದುದು ಅಪಾರ. ನಮ್ಮ ಗುರುಪೂಜ್ಯರು ನಡೆದು ಬಂದ ಸೇವಾ ಶಿವಪಥ ತುಂಬಾ ದೊಡ್ಡದು. ಆ ಪಥದಲ್ಲಿ ಇನ್ನೂ ಮುನ್ನಡೆಯಬೇಕಾಗಿದೆ. ಪೂಜ್ಯರು ೧೦೯ ವರ್ಷಗಳನ್ನು ಕ್ರಮಿಸಿ ೧೧೦ ರತ್ತ ಧಾವಿಸುತ್ತಿರುವ ಈ ಸಂದರ್ಭದಲ್ಲಿಯೂ ಅವರ ನಿತ್ಯಸೇವಾ ಕೈಂಕರ್ಯ ನಮಗೆ ದೊಡ್ಡದು. ಶ್ರೀಗಳವರು ಈ ಮಠವನ್ನು 'ಕಟ್ಟು'ವಲ್ಲಿ ಕಂಡ ಕನಸು, ನನಸಾಗಲು ವಹಿಸಿದ ಶ್ರಮ ಜನಮನದಲ್ಲಿ ಉಳಿದಿರುವುದನ್ನು ತಿಳಿದಿದ್ದೇವೆ. ಮಕ್ಕಳಲ್ಲಿ ದೇವರನ್ನು ಕಂಡವರು ಅವರು. ಭಕ್ತರಲ್ಲಿ ಭಗವಂತನನ್ನು ದರ್ಶಿಸಿದವರು. ಲೋಕದ ಏಳಿಗೆಗಾಗಿ ತಮ್ಮ ಕಾಯವನ್ನು ದುಡಿಸಿಕೊಂಡು ಬಂದವರು. ವಿದ್ವತ್ತಿನ ಎತ್ತರದ ಶಿವಗಿರಿಯಾಗಿರುವಂಥವರು. ಬಸವಾದಿ ಶರಣರ ತತ್ತ್ವಾದರ್ಶಗಳನ್ನು ಅನುಸರಿಸಿದವರು. ಕಾವಿ ಕಾಷಾಯಾಂಬರಕ್ಕೆ ಕಿಮ್ಮತ್ತು ತಂದ ಪವಿತ್ರಾತ್ಮರು. ಮಠಾಧಿಪತಿಗಳಿಗೆಲ್ಲ ಆದರ್ಶವಾಗಿರುವಂಥವರು. ಪೂಜ್ಯರ ಲೋಕಸೇವೆಯನ್ನು ಗಮನಿಸಿ ಕರ್ನಾಟಕ ವಿಶ್ವವಿದ್ಯಾಲಯ, ಬೆಂಗಳೂರು ವಿಶ್ವವಿದ್ಯಾಲಯಗಳು ಗೌರವ ಡಾಕ್ಟರೇಟ್ ನೀಡಿ ಸಂತೋಷಿಸಿದ್ದು ಸಹಜ. ಆದರೆ, ನಾವಿನ್ನೂ ಆ ಗುರುಪಥದಲ್ಲಿ ನಡೆಯುವುದು ಬಹಳ ಬಹಳವಿದೆ. ಆದುದರಿಂದಲೇ ವಿಶ್ವವಿದ್ಯಾಲಯ ನೀಡುತ್ತಿರುವ ಡಾಕ್ಟರೇಟ್ ಪದವಿಯನ್ನು ಸ್ವೀಕರಿಸಲು ನಿರಾಕರಿಸುತ್ತಿದ್ದೇವೆ. ಪ್ರಾಜ್ಞಬಂಧುಗಳು ಯಾರೂ ಅನ್ಯಥಾ ಭಾವಿಸಬಾರದು.

ಪ್ರೊ. ಹೆಚ್.ವಿ. ವೀರಭದ್ರಯ್ಯ
ಸಂಪಾದಕರು







## ಕರ್ನಾಟಕದ ಆದರ್ಶ ಸಂಸ್ಥೆಗಳು

ವೀರಶೈವ ಮಠಗಳು ಲೋಕಕಲ್ಯಾಣಕ್ಕೆ ಅರ್ಪಿಸಿಕೊಂಡ ದಾಸೋಹ ಸಂಸ್ಥೆಗಳು ಶಿಕ್ಷಣ ಪ್ರಸಾರ, ಧಾರ್ಮಿಕ ಜಾತ್ರೆಗಳಂಥ ಜನಸೇವಾ ಕಾಯಕದಲ್ಲಿ ತಮ್ಮ ಆತ್ಮಕಲ್ಯಾಣವನ್ನು ಕಂಡುಕೊಂಡ ಕ್ರಿಯಾಕೇಂದ್ರಗಳು. ರಾಷ್ಟ್ರನಿರ್ಮಾಣದಲ್ಲಿ ಮಹತ್ತರ ಪಾತ್ರ ವಹಿಸಿದ್ದು ಸರ್ವವೇದ್ಯ. ಮರ್ತ್ಯವನ್ನು ನಿರಾಕರಿಸದೆ, ಕರ್ತಾರನ ಕಮ್ಮಟವೆಂದೇ ಗೌರವಿಸಿ ಮುನ್ನಡೆದುವು. ಮಠಾಧಿಪತಿಗಳ ಪವಿತ್ರ ಚಾರಿತ್ರ್ಯ ಸಮಾಜವನ್ನು ಸದಾ ಎಚ್ಚರವಾಗಿರುವಂತೆ ಮಾಡುತ್ತ ಬಂದಿತು. ಆದರ್ಶ ಸಂಸ್ಕೃತಿಯನ್ನು ರೂಪಿಸಿತು. ಬಸವಾದಿ ಶರಣರ ದಿವ್ಯಸಂದೇಶವನ್ನು ಆಚರಣೆಗೆ ತರುವಲ್ಲಿ ವಿರಕ್ತ ಮಠಗಳು ಶ್ರದ್ಧಾನಿಷ್ಠೆಗಳಿಂದ ಸೇವೆ ಸಲ್ಲಿಸುತ್ತ ಬಂದುದು ಸ್ಮರಣೀಯವಾದುದು.

ಒಂದೊಂದು ವೀರಶೈವ ಮಠಗಳದೂ ಒಂದೊಂದು ವೈಶಿಷ್ಟ್ಯ. ಆತ್ಮಕಲ್ಯಾಣವನ್ನು ಲೋಕಕಲ್ಯಾಣದಲ್ಲಿ ಅಳವಡಿಸಿಕೊಂಡು ಮುನ್ನಡೆದುವು. ಭಕ್ತರ ಮನೆಗೆ ಹೋಗಿ ಕಂತೆಭಿಕ್ಷೆ ಬೇಡಿ ತಂದು ಯಾತ್ರಿಕರಿಗೆ, ಮಠಕ್ಕೆ ಬಂದ ಭಕ್ತಾಧಿಗಳಿಗೆ ಉಣಬಡಿಸುವಲ್ಲಿ ತೃಪ್ತಿ ಕಂಡವು. ಕೆಲವು ಮಠಗಳು ಶರಣ ಸಾಹಿತ್ಯ ಪ್ರಕಾಶನದಲ್ಲಿ ಮುನ್ನಡೆದುವು. ಇನ್ನು ಕೆಲವು ಅಂಧ ಮಕ್ಕಳ ಕಲ್ಯಾಣದಲ್ಲಿ ತೊಡಗಿದವು. ಹೊಲೆಯ ಮಾದಿಗರೆಂಬ ಬಲೆಯನ್ನು ಕಿತ್ತೊಗೆದು ದಲಿತರ, ದೀನರ, ದರಿದ್ರರ, ಅಸಹಾಯಕರ, ಅಶಕ್ತರ, ಉದ್ಧಾರದತ್ತ ನಿರತವಾದುವು. ಸುತ್ತೆಲ್ಲ ಜನಪದ ನಗುತಿರಲಿ ಎಂಬ ಉದಾತ್ತ ಆಶಯದೊಂದಿಗೆ ಇಂದಿಗೂ ಸೇವಾಮುಖಿಗಳಾಗಿರುವ ವೀರಶೈವ ಮಠಗಳು ಕರ್ನಾಟಕದ ಆದರ್ಶ ಸಂಸ್ಥೆಗಳು.

* * *

ಮಠಗಳು ಸಮಾಜದ ಸೇವೆಗಾಗಿ ರೂಪಿತವಾದ ಸಂಸ್ಥೆಗಳು. ಜನಕಲ್ಯಾಣವೇ ಮಠದ ಗುರಿ. ಆ ಧ್ಯೇಯ ಸಾಧನೆಗಾಗಿಯೇ ಮಠದ ಸ್ವಾಮಿಗಳಾಗುವವರು ನಿರಂತರ ಕ್ರಿಯಾಶೀಲರಾಗಬೇಕು. ಧಾರ್ಮಿಕ ಶ್ರದ್ಧೆಯನ್ನು ಜನಮನದಲ್ಲಿ ಬಿತ್ತುವ ಕೈಂಕರ್ಯದಲ್ಲಿ ತಮ್ಮನ್ನು ಅರ್ಪಿಸಿಕೊಳ್ಳುವ ಮನಸ್ಸು ಅವರಲ್ಲಿ ಗಟ್ಟಿಗೊಳ್ಳುತ್ತಾ ಹೋಗಬೇಕು. ಮಠಾಧಿಪತಿಗಳು ವಿದ್ಯಾವಂತರಾಗುವುದು, ವಿಚಾರ ಶೀಲರಾಗುವುದು ಸಮಾಜದ ಆಗು–ಹೋಗುಗಳಿಗೆ ಸ್ಪಂದಿಸುವುದು ಅಪೇಕ್ಷಣೀಯ. ಲೋಕಸಂಗ್ರಹದ ಜೊತೆಯಲ್ಲಿಯೇ ಆತ್ಮಜ್ಞಾನ ಸಂಪನ್ನರಾಗುವುದು ಅತ್ಯಂತ ಅಗತ್ಯವಾದುದು. ಆತ್ಮಜ್ಞಾನವೇ ಆತ್ಮಸಾಕ್ಷಾತ್ಕಾರವೆ ಧರ್ಮ ಎಂಬ ಗಾಂಧೀಜಿಯವರ ನುಡಿಯನ್ನು ಮನನ ಮಾಡಿದಷ್ಟೂ ಒಳ್ಳೆಯದು.

## ಶ್ರೀ ಸಿದ್ಧಲಿಂಗೇಶ್ವರ ವಚನ



ಶ್ರೀ ಸಿದ್ಧಲಿಂಗೇಶ್ವರರು

***ಊರೊಳಗೆ ಉದಕ ತುಂಬಿ ಬಾಗಿಲೆಲ್ಲಾ ಕೆಸರಾದವು ನೋಡಾ***
***ಮನೆಯೊಳಗೆ ಕಸ ಹೆಚ್ಚಿ ಶಶಿಯ ನೆಳಲನೀಯದು ನೋಡಿರೇ,***
***ಊರೊಳಗಣ ಉದಕವ ಹೊರಡಿಸಿ ಬಾಗಿಲೊಳಗಣ ಕೆಸರ ಸುಟ್ಟು***
***ಮನೆಯೊಳಗಣ ಕಸವ ತೆಗೆದು***
***ಶಶಿಯ ಸಲಹಿಕೊಂಬುದ ನೀನೊಲಿದು ಕರುಣಿಸಯ್ಯಾ***
***ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ***

ಊರೊಳಗೆ-ದೇಹದಂತರಂತದಲ್ಲಿ, ಉದಕ-ಸಂಸಾರ ವಿಷಯ ಜಲವು, ತುಂಬಿ-ಭರಿತವಾಗಿ, ಬಾಗಿಲೆಲ್ಲ-ಇಂದ್ರಿಯಗಳೆಂಬ ದ್ವಾರಗಳಲ್ಲಿ, ಕೆಸರಾದವು – ವಿಷಯಂಗಳೆಂಬ ಪಂಕವುಂಟಾದವು. ನೋಡಾ-ಕಂಡಾ, ಮನೆಯೊಳಗೆ – ಅಂತರಂಗವೆಂಬ ಗೃಹದಲ್ಲಿ, ಕಸ- ಮರಣರೂಪವಾದ ಅಜ್ಞಾನವೆಂಬುದೆ ಕಸವು, ಹೆಚ್ಚಿ- ವರ್ಧನವಾಗಿ, ಶಶಿಯ-ಆ ಜ್ಞಾನವನ್ನು, ಏಳಲೀಯದು – ಹುಟ್ಟಗೊಡದು, ನೋಡಿರೆ – ಕಂಡಿರೆ, ಊರೊಳಗಣ – ದೇಹದಂತಹರಂಗದೊಳಗಣ, ಉದಕವ – ಸಂಸಾರವಿಷಯ ಜಲವನೂ, ಹೊರಡಿಸಿ – ನಷ್ಟವ ಮಾಡಿ, ಬಾಗಿಲೊಳಗಣ – ಇಂದ್ರಿಯಗಳೆಂಬ ಕವಾಟದೊಳಗಣ, ಕೆಸರ- ವಿಷಯಂಗಳೆಂಬ ಪರಿಕರವನು, ಸುಟ್ಟು – ದಹಿಸಿ, ಮನೆಯೊಳಗ್ಗಣ – ಅಂತರಂಗವೆಂಬ ಗೃಹದೊಳಗಣ, ಕಸವ – ಮರಣರೂಪವಾದ ಅಜ್ಞಾನವೆಂಬ ಕಸವನು, ತೆಗೆದು – ಕಡೆಗೆ ಮಾಡಿ, ಶಶಿಯ – ಜ್ಞಾನವನು, ಸಲಹಿಕೊಂಬುದ – ಜ್ಞಾನವನು ವರ್ಧನವ ಮಾಡಿಕೊಂಬುದ, ನೀನು – ಪರಶಿವ ಲಿಂಗವು, ಒಲಿದು – ಪ್ರೀತಿಯಿಂದ ಕರುಣಿಸಯ್ಯಾ, – ಕೃಪೆ ಮಾಡಯ್ಯಾ ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ.

***(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು- ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ(ರಿ.) ಎಡೆಯೂರು- ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)***

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಮಾತಿನೊಳು ಮನದೊಳಗು ನೀನೆ ತುಂಬಿರುವೆ
ನಿನ್ನದೇ ರೂಪ ಕಣ್ಣೊಳಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬೀಜವೃಕ್ಷ ತೆರದಿ ನೀನಿರುವೆ ಶ್ರೀಗುರುವೆ
ಸಾಜ ಸಾಕಾರವಾಗಿರುವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಾಡ ಪುಣ್ಯವೆಂಬೆ ದೇಶ ಭಾಗ್ಯವೆಂಬೆ
ಭುವನದ ಭಾಗ್ಯ ನೀನೆಂಬೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮನವ ಶಿವಮುಖಮಾಡಿ ತನುವನೀ ಬಳಸಿದೆ
ಜನಹಿತದಿ ಸಂತಸವ ನೀಕಂಡೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಳೆ ಬಿಸಿಲು ಚಳಿಗಾಳಿ ಅಡ್ಡಬರಲಿಲ್ಲವು
ನೀ ಮಾಳ್ಪ ಲೋಕಮಂಗಳಕೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಚಾರದ ಅಡಿಗಲ್ಲ ನೀನಿಟ್ಟು ಕಟ್ಟಿರುವೆ
ಶ್ರೀಮಠದ ಚರಿತೆಯ ಬರೆದಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಾಕಿ ಸಲಹಿದ ತಂದೆ ಕವಿ ರವಿ ಕೋಗಿಲೆಗಳ
ನೀಡಿ ನಿತ್ತರಿಸಿದೆ ನಿಪುಣರ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸೂರ್ಯನು ಹಗಲಿಗೆ ಇರುಳಿಗೆ ಚಂದ್ರಮ
ಗುರುವೆ ನೀನಾದೆ ಹಗಲಿರುಳಿಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭವಿಯ ಸಂಸ್ಕರಿಸಿದೆ ಭಕ್ತನುದ್ಧರಿಸಿದೆ
ಭವಿ ಭಕ್ತ ಲೋಕವ ಹಸಗೈದೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ದೇಹ ಬಾಗುತ ಬಂತು ಮನವು ಅರಳುತ ಬಂತು
ದೇಹ ಮನಗಳೆರಡು ಬೆಳಗಿದುವು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ







## ದ್ವಾಸುಪರ್ಣಾ

– ಶ್ರೀ ಸಿದ್ಧೇಶ್ವರ ಸ್ವಾಮಿಗಳು *

**ನೂ**ರಾರು ಜನ ಸಂತರು ಶರಣರು ದೇವನನ್ನು ವರ್ಣಿಸಿದ್ದಾರೆ; ದೇವನನ್ನು ನೇರವಾಗಿ ವರ್ಣಿಸುವ ಬದಲು ಉಪಮೆ, ದೃಷ್ಟಾಂತಗಳಿಂದ ಕೇಳುಗನ ಮನಸ್ಸಿನ ಮೇಲೆ ಬಿಂಬಿಸುವಂತೆ ಉಪದೇಶಿಸಿದ್ದಾರೆ. ಹೇಳುವ ಮಾತು ಕೇಳುಗನ ಮನಸ್ಸಿನ ಮೇಲೆ ಸ್ಪಷ್ಟವಾಗಿ ಮೂಡಬೇಕಾದರೆ, ಈ ಅಲಂಕರಣದ ಭಾಷೆ ಅವಶ್ಯ! ಉದಾಹರಣೆಗಾಗಿ ಶಂಕರಾಚಾರ್ಯರಿಗೆ ಜಗತ್ತು ಮಿಥ್ಯೆಯಾಗಿದೆ ಎಂದು ಕಂಡು ಬಂತು. ಆದರೆ ಅದನ್ನು ತಿಳಿಸುವುದು ಹೇಗೆ? ಒಂದು ವಸ್ತು ಸತ್ಯವಾದರೂ ಆಗಿರಬೇಕು. ಅಸತ್ಯವಾದರೂ ಆಗಿರಬೇಕು. ಎರಡೂ ಅಲ್ಲ ಎನ್ನುವುದನ್ನು ತಿಳಿಸುವುದು ಹೇಗೆ? ಅಂಥ ಕಲ್ಪನೆ ಹೇಗೆ ಮಾಡುವುದು? ಅದಕ್ಕಾಗಿ ಅವರು ದೃಷ್ಟಾಂತ ರೂಪಕ ಬಳಸಿದರು. ಅದೇ ಹಗ್ಗ-ಹಾವು. ಹಗ್ಗದಲ್ಲಿ ಹಾವಿನ ಭಾಸ. ಭ್ರಾಂತಿಯ ಹಾವಿನ ಅಸ್ತಿತ್ವ ಎಂಥದು? ಅದು ಹಗ್ಗದಂತೆ ಸತ್ಯವಲ್ಲ. ಎಂದೂ ಇಲ್ಲದ ವಸ್ತುವಿನಂತೆ ಅಸತ್ಯವಲ್ಲ. ಅಂದರೆ ಹಾವು ಸದಸತ್-ವಿಲಕ್ಷಣ. ಹಾಗೆ ಜಗತ್ತಿನ ಅಸ್ತಿತ್ವವೂ ಸಹ. ಈ ದೃಷ್ಟಾಂತವು ಸೂಕ್ಷ್ಮ ಕಲ್ಪನೆ ಯನ್ನು ಸ್ಫುಟಗೊಳಿಸುತ್ತದೆ.

ಅಸತ್ಯ ಎಂದರೆ ಎಂದೂ ಇಲ್ಲದಿರುವುದು. ಉದಾ: ಗೋಲಾದ ಚೌಕ. ಚೌಕಾದ ತ್ರಿಕೋನ ಇತ್ಯಾದಿ. ಗೋಲಾದ ಚೌಕ ಅನ್ನುವುದು ಶಬ್ದ ಮಾತ್ರ, ವಸ್ತು ಶೂನ್ಯ. ಕೇವಲ ವಿಕಲ್ಪ. ಶಾಬ್ದಿಕ ಅರ್ಥ ಇದೆ. ಆದರೆ ವಸ್ತು ಇಲ್ಲ. ಶಬ್ದಕ್ಕೆ ಅರ್ಥ ಇದೆ. ಭಾವಕ್ಕೆ ನಮಗೆ ಬರುವುದಿಲ್ಲ. ವಸ್ತು ಅಲ್ಲಿ ಇಲ್ಲ. ವಸ್ತು ಇರದೆ ಕೇವಲ ಶಾಬ್ದಿಕವಾಗಿ ಒಂದು ವಸ್ತು ಇದ್ದರೆ ಅದು ಅಸತ್ಯ. ಹಾವು ಹಾಗೆ ಅಸತ್ಯವಲ್ಲ, ಅದು ಕಾಣುತ್ತದೆ. ಆದರೆ ಸ್ಫುಟವಾದ ದೃಶ್ಯ ವಸ್ತುಗಳಂತೆ ಸತ್ಯವೂ ಅಲ್ಲ.

ಈ ಜಗತ್ತು ಸತ್ಯವೂ ಅಲ್ಲ, ಅಸತ್ಯವೂ ಅಲ್ಲ. ಈ ಜಗತ್ತು ಸಂಪೂರ್ಣವಾಗಿ ಇಲ್ಲ ಎಂದಲ್ಲ, ಅಥವಾ ಶಾಶ್ವತವಾಗಿ ಇದೆ ಎಂತಲೂ ಅಲ್ಲ. ಸತ್=ಶಾಶ್ವತ ವಸ್ತು ಅಲ್ಲದ್ದರಿಂದ ಸದ್ ವಿಲಕ್ಷಣ. ಇಲ್ಲದ ವಸ್ತುವಿನಂತೆ ಇಲ್ಲವಾದುದಲ್ಲವಾದುದರಿಂದ ಅಸದ್ ವಿಲಕ್ಷಣ. ಹಾಗೆ ಸತ್ಯಕ್ಕೆ ಅಸತ್ಯಕ್ಕೆ ವಿಲಕ್ಷಣವಾದ ಅಸ್ತಿತ್ವವನ್ನು ಶಂಕರರು ಜಗತ್ತಿಗೆ ಕಲ್ಪಿಸಿದರು. ಈ ಅಸ್ತಿತ್ವವನ್ನು ನಮ್ಮ ಗಮನಕ್ಕೆ ತರುವುದಕ್ಕಾಗಿ ಯೋಗ್ಯ ಹಾಗೂ ಸಮರ್ಥ ದೃಷ್ಟಾಂತ ಬಳಸಿದರು. ಈ ಜಗತ್ತು ಬರೀ ತೋರಿಕೆಯಲ್ಲಿದೆ ನೈಜವಾಗಿಲ್ಲ ಎಂಬ ಮಾತನ್ನು ಮನ ಮುಟ್ಟುವ ಹಾಗೆ ಹೇಳಿದರು.

ಪರದೇಶದಲ್ಲೂ ಇಂಥ ಚಿಂತನೆಯಿದೆ. ವಸ್ತುವಿನಲ್ಲಿ ಗುಣಗಳಿವೆ. ಗುಣಗಳಿಗೆ ಆಧಾರವಾಗಿ ಒಂದು ಮೂಲ ಸತ್ ಇದೆ. ಅದು ಸಬ್ಸ್ಟೆನ್ಸ್, ಗುಣ ಸಮುದಾಯದ ತೋರಿಕೆಯ ಅಪಿಯರೆನ್ಸ್. ಇರುವ ಅಸ್ತಿತ್ವ ಕಾಣದು, ಕಾಣುವ ತೋರಿಕೆ ಇರದು. ಏನು ಇದೆ ಅದು ಕಾಣಿಸುವುದಿಲ್ಲ. ಏನು ಇಲ್ಲ ಅದು ಕಾಣಿಸುತ್ತದೆ. ಹೂವಿನ ಸಬ್ಸ್ಟೆನ್ಸ್ ಇದೆ; ಕಾಣಿಸದು. ಗುಣ ಸಮುದಾಯ ಅಸತ್! ಸ್ವ ಅಸ್ತಿತ್ವ ರಹಿತ. ಆದರೆ ಅದು ಕಾಣಿಸುವುದು. ವಿಜ್ಞಾನಿಯೂ ಇಂಥದೇ ಮಾತನ್ನು ಹೇಳುತ್ತಾನೆ. ಟೇಬಲ್ ಎನ್ನುವುದು ಪ್ರಪಂಚ ಸಂಖ್ಯೆಯ ಅಣು ಸಮೂಹ ಅಷ್ಟೇ. ನಮಗೆ ತೋರುವ ಟೇಬಲ್ ಕೇವಲ ತೋರಿಕೆ ಅಷ್ಟೆ. ಅಂದರೆ ಟೇಬಲ್ ಇದೆ ಎಂದಲ್ಲ, ಇಲ್ಲವೆಂತಲೂ ಅಲ್ಲ. ಇನ್ನೊಂದು ಉದಾಹರಣೆ ನೋಡಿ. ನೀರಿನಲ್ಲಿ H ಮತ್ತು O ಮೂಲ ಘಟಕ. ಅವು ಅಣುಗಳು. ಅಣುಗಳು ಶಕ್ತಿಯ ಗುಳ್ಳೆಗಳು. ಅವು ಇವೆ. ಆದರೆ ಅವುಗಳ ಸಮೂಹದಲ್ಲಿ ತೋರಿದ 'ನೀರು' ಎನ್ನುವುದು ನಮ್ಮ ಅನುಭವಕ್ಕೆ ಬರುವ ಪ್ರಿಯವಸ್ತು. ಆದರೆ ಅದರಲ್ಲಿರುವುದೆಲ್ಲ ಬರೀ ಶಕ್ತಿ !! ನೀರು ಇದೆ ಎಂದರೆ ಇದೆ; ಇಲ್ಲವೆಂದರೆ ಇಲ್ಲ. ಎಲ್ಲವೂ ಹೀಗೆಯೇ. ಆದ್ದರಿಂದ ಶಂಕರರು ಜಗತ್ತನ್ನು 'ಮಾಯಿಕ' ಎಂದು ವರ್ಣಿಸಿದರು ದೃಷ್ಟಾಂತದ ಮೂಲಕ !

ಬಸವಣ್ಣನವರು ಹೇಳುತ್ತಾರೆ.

***ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ***
***ಅಂಬುಜಕೆ ಭಾನುವಿನ ಉದಯದ ಚಿಂತೆ***
***ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ***
***ಎನಗೆ ನಮ್ಮ ಕೂಡಲಸಂಗಮದೇವರ ನೆನೆವುದೆ ಚಿಂತೆ***

ಚಕೋರ ಪಕ್ಷಿ ಹೇಗೆ ಚಂದ್ರಮನ ಚಿಂತಿಸುತ್ತದೆಯೋ ಅಂಬುಜ ಭಾನುವ ಚಿಂತಿಸುವುದೋ ಹಾಗೆ ಬಸವಣ್ಣನವರು ದೇವನ ನೆನೆಸುತ್ತಾರೆ. ದೃಷ್ಟಾಂತಗಳು ಹೇಳಬೇಕಾದ್ದನ್ನು ಸ್ಪಷ್ಟಪಡಿಸುತ್ತವೆ.

ಬಂಧನಕ್ಕೆ ಬಂದ ಗಿಳಿ ತನ್ನ ಬಂಧುಗಳ ನೆನೆಸುತ್ತದೆ. ಸುಂದರವಾದ ಪಂಜರ, ಅದರೊಳಗೆ ಗಿಳಿ. ಅದಕ್ಕೆ ಹಣ್ಣು ಹಂಪಲ, ನೀರು; ಎಲ್ಲ ಕೊಡುತ್ತೇವೆ. ಪ್ರೀತಿಸುತ್ತೇವೆ. ಆದರೆ ಅದನ್ನೆಲ್ಲಾ ಅನುಭವಿಸಿಯೂ ತನ್ನ ಹೃದಯದಲ್ಲಿ ಗಿಳಿ ಅರಣ್ಯವನ್ನು ನೆನೆಸುತ್ತದೆ. ಮಾವಿನ ಮರದಲ್ಲಿ ಕುಳಿತ ತನ್ನ ಬಂಧು ಬಾಂಧವರನ್ನು ನೆನೆಸುತ್ತದೆ. ಹಾಗೆ ಬಸವಣ್ಣನವರು ಎಲ್ಲದರ ಮಧ್ಯೆ, ಪ್ರೇಮಪಂಜರದ ಮಧ್ಯೆ ಕೂಡಲ ಸಂಗಮನನ್ನು ನೆನೆಸುತ್ತಾ ಇದ್ದರು. ಒಂದು ವೇಳೆ ದೃಷ್ಟಾಂತ ಬಳಸದಿದ್ದರೆ ಬಸವಣ್ಣನವರ ಭಾವತೀವ್ರತೆ ನಮಗೆ ಗೊತ್ತಾಗುತ್ತಿರಲಿಲ್ಲ. ಆದ್ದರಿಂದ ಅಧ್ಯಾತ್ಮ ಸಾಹಿತ್ಯದೊಳಗೆ ದೃಷ್ಟಾಂತ ಬಳಸುವ ಪದತಿ ಬಹಳ ಬಳಕೆಗೆ ಬಂತು. ಬಹಳ ಪರಿಣಾಮಕಾರಿಯಾಗಿ ಬಳಸಿದರು. ಅದು ಅವರ ಅತ್ಯಂತ ಸೂಕ್ಷ್ಮವಾದ ಆಲೋಚನೆಗಳನ್ನು, ಭಾವನೆಗಳನ್ನು ಸ್ಪಷ್ಟವಾಗಿ ಚಿತ್ರಿಸಿತು.

ಭಗವಂತ ಅಂದರೇನು? ಜೀವ ಅಂದರೇನು? ಇದನ್ನು ಚಿತ್ರಿಸುವುದಕ್ಕಾಗಿ ಉಪನಿಷತ್ತು ಒಂದು ಸುಂದರ ದೃಷ್ಟಾಂತ ಬಳಸಿದೆ.

* ಜ್ಞಾನಯೋಗಾಶ್ರಮ, ಬಿಜಾಪುರ ಜಿಲ್ಲೆ.

*ದ್ವಾ ಸುಪರ್ಣಾ ಸಯುಜಾ ಸಖಾಯಾ*
*ಸಮಾನಂ ವೃಕ್ಷಂ ಪರಿಷಸ್ವಜಾತೇ*
*ತಯೋರೇಕಃ ಪಿಪ್ಪಲಂ ಸ್ವಾದ್ವ-*
*ತ್ತ್ಯನಶ್ನನ್ನನ್ಯೋ ಅಭಿಚಾಕಶೀತಿ*

(ಮುಂ. II, ೧, ೩-೪)

ನಾಲ್ಕು ಸಾಲುಗಳಲ್ಲಿ ಈ ಜಗತ್ತು, ಜೀವ, ಈಶ ಹಾಗೂ ಅವರ ಸ್ಥಿತಿ ಅದ್ಭುತವಾಗಿ ಚಿತ್ರಿತವಾಗಿದೆ. ಗ್ರಂಥ ಬರೆದು ತಿಳಿಸಿದರೂ ಸ್ಪಷ್ಟವಾಗದ ಕಲ್ಪನೆಗಳನ್ನು ಸುಲಭ ದೃಷ್ಟಾಂತಗಳ ಮೂಲಕ ರೇಖಿಸಿದ್ದಾರೆ !

ಒಂದು ಗಿಡ, ಹಣ್ಣಿನ ಗಿಡ. ಅದು ವಿಶಾಲವಾಗಿ ಹರವಿಕೊಂಡಿದೆ. ಶಾಖೆಶಾಖೆಗಳು. ಅಲ್ಲಿ ಸಾವಿರ ಸಾವಿರ ಹಣ್ಣುಗಳು. ಇಂತಹ ವೃಕ್ಷದಲ್ಲಿ ಒಂದು ಪಕ್ಷಿ ಕುಳಿತಿದೆ. ಆ ಪಕ್ಷಿ ಕುಳಿತ ಶಾಖೆಯ ಕೆಳಗಿನ ಶಾಖೆಯಲ್ಲಿ ಇನ್ನೊಂದು ಪಕ್ಷಿ ಕುಳಿತಿದೆ. ಈ ಪಕ್ಷಿ ಹಣ್ಣು ತಿನ್ನುತ್ತಿದೆ. ಮೇಲಿನ ಪಕ್ಷಿ ಏನನ್ನೂ ತಿನ್ನದೆ ಬರೀ ಪ್ರಕಾಶ ಚೆಲ್ಲುತ್ತಿದೆ. ಆ ಪಕ್ಷಿಯ ಪ್ರಕಾಶದೊಳಗೆ ಗಿಡ ಕಾಣಿಸುತ್ತದೆ. ಅಲ್ಲಿರುವ ಹಣ್ಣುಗಳು ಕಾಣುತ್ತವೆ. ಕೆಳಗಿರುವ ಪಕ್ಷಿ ಕಾಣುತ್ತದೆ. ಆ ಪಕ್ಷಿಯ ಬೆಳಕಿನೊಳಗೆ ಈ ಕೆಳಗಿನ ಪಕ್ಷಿ ಹಣ್ಣುಗಳನ್ನು ತಿನ್ನುವುದರಲ್ಲಿ ಮಗ್ನವಾಗಿದೆ. ಈ ಪಕ್ಷಿಗೆ, ಆ ಪಕ್ಷಿಗೆ ಅತ್ಯಂತ ಮೈತ್ರಿ, ಬಿಟ್ಟಿರದಷ್ಟು ಗಾಢ ಮೈತ್ರಿ. ಎರಡೂ ಕೂಡಿಯೇ ಇರುತ್ತವೆ. ಆದರೆ ಸ್ವಭಾವ ಭಿನ್ನ. ಮೇಲಿನದು ಪ್ರಕಾಶ ಮಾಡುತ್ತದೆ. ಕೆಳಗಿನದು ತಿನ್ನುವಲ್ಲಿ ಮಗ್ನ. ಒಂದೇ ವೃಕ್ಷದಲ್ಲಿ ಅವು ಆಶ್ರಯ ಪಡೆದಿವೆ. ಅಲ್ಲಿ ಇರುವ ಹಣ್ಣುಗಳು ಸುರುಚಿ. ಆ ಪಕ್ಷಿ ತನ್ನನ್ನೇ ಮರೆತು ಹಣ್ಣನ್ನು ತಿನ್ನುವಲ್ಲಿ ಮೈಮರೆತು ಇರಬೇಕಾದರೆ ಆ ಹಣ್ಣಿನ ರಸವೆಷ್ಟು ಸಿಹಿ ಇರಬೇಡ! ತಿನ್ನುವುದರಲ್ಲಿ ಪಕ್ಷಿ ಮೈ ಮರೆತುಬಿಟ್ಟಿದೆ !

ಮೇಲಿನ ಪಕ್ಷಿಗೆ ಹಣ್ಣನ್ನು ತಿನ್ನುತ್ತಿರುವ ಪಕ್ಷಿ ಕಾಣಿಸುತ್ತದೆ. ಆ ಹಣ್ಣಿನ ರಸವನ್ನು ಹೀರಿ ಸಂತೋಷಪಡುವ ಪಕ್ಷಿ ಕಾಣಿಸುತ್ತದೆ. ಆದರೆ ತಾನು ಮಾತ್ರ ಅದರಂತೆ ಆ ಹಣ್ಣಿಗೆ ಮೋಹಗೊಂಡಿಲ್ಲ. ಇದು ಆ ಪಕ್ಷಿಯ ವಿಶೇಷತೆ. ಸಾಮಾನ್ಯವಾಗಿ ಭೋಗ ದೃಶ್ಯ ಕಂಡು ಮನ ಬಯಸುತ್ತದೆ.

ಒಬ್ಬ ಮುದುಕ ದಾರಿಯಲ್ಲಿ ಹೊರಟ್ಟಿದ್ದಾನೆ. ಭಿತ್ತಿಯ ಶೃಂಗಾರ ರಸಚಿತ್ರ ನೋಡುತ್ತಾನೆ. ಆ ಚಿತ್ರ ನೋಡಿದ ಮರಕ್ಷಣವೇ ಮುದುಕನಿಗೆ ಹಿಂದಿನ ಕಥೆ ನೆನಪಾಗುತ್ತದೆ. ತಾನು, ತನ್ನ ಹೆಂಡತಿ, ಮೆರವಣಿಗೆ, ಎಲ್ಲಾ ನೋಡಿ ಕಣ್ಣು ತುಂಬಿ ಮೈಮರೆಯುತ್ತಾನೆ ಮುದುಕ. ಪ್ರತ್ಯಕ್ಷ ಇಲ್ಲ. ಒಂದು ದೃಶ್ಯ ನೋಡಿ ಮೈ ಮರೆತ. ದೃಶ್ಯದ ಪರಿಣಾಮ ಅಷ್ಟು ತೀವ್ರ ಮನಸ್ಸಿನ ಮೇಲೆ ! ನೋಡಿದ, ಬರೀ ನೋಟದಿಂದಲೇ, ಇಳಿ ವಯಸ್ಸಿನಲ್ಲಿ ಮನಸ್ಸು ಇಷ್ಟು ಮುಗವಾಗುತ್ತದೆ ಅಂದ ಬಳಿಕ ಯುವಕನ ಮನಸ್ಸು ಎಷ್ಟು ಮೋಹಗೊಳ್ಳಬೇಡ? ಆದರೆ ಇಲ್ಲೊಂದೆರಡು ಪಕ್ಷಿಗಳು. ಒಂದು ಪಕ್ಷಿ ಆನಂದವಾಗಿ ತಿನ್ನುತ್ತದೆ. ಮಧುರ ಫಲ. ಒಳಗಿರುವ ತಿರುಳನ್ನು ತಿಂದು ಸಂತೋಷಪಡುತ್ತದೆ. ಇನ್ನೊಂದು ಪಕ್ಷಿ ಅದರ ಮೇಲೆ ಪ್ರಕಾಶ ಚೆಲ್ಲಿ ನೋಡುತ್ತಾ ಇದ್ದರೂ ಆ ಪಕ್ಷಿ ತಿನ್ನುತ್ತಿರುವ ಹಣ್ಣಿನ ಮೋಹ ಇಲ್ಲ ಅದಕ್ಕೆ, ಅರ್ಥಗರ್ಭಿತ ದೃಷ್ಟಾಂತ !

ಮೇಲಿರುವ ಪಕ್ಷಿ ಎಷ್ಟು ಪ್ರಕಾಶಗೊಳಿಸಿ ಎಚ್ಚರಿಸಿದರೂ ಆ ಕಡೆ ಲಕ್ಷ್ಯ ಕೊಡದಷ್ಟು ಮೈಮರೆತು ಬಿಟ್ಟಿದೆ. ಹಣ್ಣು ತಿನ್ನುವುದರಲ್ಲಿ ಆ ಕೆಳಪಕ್ಷಿ. ಹಾಗೆ ನಮ್ಮ ಸ್ಥಿತಿ. ೬೦ ವರ್ಷವಾದರೂ ಎಚ್ಚರ ಆಗಲಾರದಷ್ಟು ಮಗ್ನತೆ ಸಂಸಾರದಲ್ಲಿ. ಜೀವ ಪಕ್ಷಿ ಹಣ್ಣು ತಿನ್ನುವುದರಲ್ಲಿ ಮಗ್ನ ! ಈ ಸಂಗತಿಯನ್ನು ಚಿಂತಿಸಬೇಕು. ಚಿಂತನೆ ಮಾಡಿದರೆ ನಮ್ಮ ಜೀವನ ಹೇಗಿದೆ, ದಿವ್ಯ ಜೀವನ ಹೇಗಿರುತ್ತದೆ – ಎನ್ನುವುದರ ಕಲ್ಪನೆ ಬರುತ್ತದೆ. ನಾವು ಮೋಹಾವೃತರು, ಉಪಭೋಗಶೀಲರು, ಮೋಹದ ದಾಸರು ! ಹೀಗಾಗಿ ಅನ್ಯಚಿಂತನೆಗೆ ಅವಕಾಶವಿಲ್ಲ.

ಭೋಗಮೋಹಿಯಾದ ಈ ಪಕ್ಷಿ ವೀತಶೋಕವಾಗ ಬೇಕಾದರೆ ಏನು ಮಾಡಬೇಕು? ಮುಂದಿನ ಎರಡು ಸಾಲುಗಳಲ್ಲಿ ಹೇಳಿದ್ದಾರೆ. *ಇಂತಹ ಪಕ್ಷಿ ಎಚ್ಚರವಾಗಬೇಕು. ಮೋಹದಿಂದ ಪಾರಾಗಬೇಕು. ಮೋಹದ ಶೋಕದಿಂದ ಮುಕ್ತವಾಗಬೇಕು ! ವೀತಶೋಕಿಯಾಗಬೇಕು !* ಹಾಗಾಗ ಬೇಕಾದರೆ ಅದು ತನ್ನ ಮೇಲಿನ ಪಕ್ಷಿಯನ್ನು ನೋಡಬೇಕು. ಅದು ಈಶ. ತನ್ನಂತೆ ಅನೀಶವಲ್ಲ – ಎಂಬುದನ್ನು ಗಮಿಸಬೇಕು. ಹಣ್ಣಿನ ಆಕಾರ, ರುಚಿ, ತನ್ನನ್ನು ಹುಚ್ಚು ಮಾಡಿದೆ; ಆದರೆ ಮೇಲಿನ ಪಕ್ಷಿ ಹಣ್ಣಿನ ಪ್ರಭಾವಕ್ಕೆ ಒಳಗಾಗಿಲ್ಲ. ಹಣ್ಣಿನ ಪ್ರಭಾವದಿಂದ ಹೊರಗೆ ಇರುವುದೇ ಈಶ. ಹಣ್ಣಿನ ಪ್ರಭಾವಕ್ಕೆ ಸಿಕ್ಕಿಬಿದ್ದಿರುವುದೇ ಅನೀಶ. ಅದು ಶೋಕ ರಹಿತ. ತಾನು ಶೋಕ ಶೀಲ. ಇದನ್ನು ಚಿಂತಿಸಬೇಕು.

ಕೆಳಗಿನ ಪಕ್ಷಿ ಮೇಲಿನ ಪಕ್ಷಿಯನ್ನು ನೋಡಿ ಅದರ ಮಹಿಮೆಯನ್ನು ಗುರ್ತಿಸಬೇಕು. ಮಹಿಮೆ ಅಂದರೆ ಸದಾ ಪ್ರಕಾಶ ಮಾಡುತ್ತಿರುವುದು. ಎಲ್ಲಾ ಉಪಭೋಗ ವಸ್ತುಗಳು ಇದ್ದಾಗ ಆ ವಸ್ತುಗಳತ್ತ ಲಕ್ಷ್ಯ ಕೊಡದೆ ಇರುವುದು ಮಹಿಮೆ. ಈ ಕೋಣೆಯೊಳಗೆ ಯಾರಿಲ್ಲ ಎಂದು ತಿಳಿದುಕೊಳ್ಳಿ, ಹತ್ತು ಪೈಸೆ ಬಿದ್ದಿದೆ. ಅದನ್ನು ಎತ್ತಿಕೊಳ್ಳಬೇಕು ಎನ್ನಿಸುತ್ತದೆ. ಇದು ಮೋಹ ಮಹಿಮೆ. ಇದು ಇಲ್ಲದವರು ನಿಜವಾದ ಮಹಿಮಾನ್ವಿತರು. ಸಮಸ್ತ ರಾಜ್ಯ ಕೊಟ್ಟರೂ ಅತ್ತ ಲಕ್ಷ್ಯ ವಹಿಸದ ಸ್ಥಿತಿಯು 'ಮಹಿಮೆ'. ಅದು ವಿರಾಗ ಮಹಿಮೆ!

ಹಾಗೆ ಮೇಲಿನ ಪಕ್ಷಿಯ ಮಹಿಮೆ! ಅಂದರೆ ಕೇವಲ ನೋಡುತ್ತದೆ, ಆಸೆ ಪಡುವುದಿಲ್ಲ. ಇಂತಹ ಅದರ ಮಹಿಮೆಯನ್ನು ಕೆಳಗಿನ ಪಕ್ಷಿ ಗುರುತಿಸಿದರೆ ಅದು ವೀತಶೋಕ ವಾಗುತ್ತದೆ! ಅದರ ಮೋಹ ಮರೆಯಾಗುತ್ತದೆ. ಇದು ಸ್ವಾತಂತ್ರ್ಯ! ಮೋಹ ಮುಕ್ತಿ ! ಆ ಮೇಲಿನ ಪಕ್ಷಿ ಹಾರಿ ಹೋಗುತ್ತದೆ. ಕೆಳಗಿನ ಪಕ್ಷಿ ಹಾರಿ ಹೋಗುತ್ತದೆ. ಎರಡೂ ಬಯಲಾಗುತ್ತವೆ. ಏನು ಉಳಿಯುತ್ತದೆ ಅದು ಅನಂತವಾದ ಆಕಾಶ !

ದೃಷ್ಟಾಂತವಿದು. ಇಲ್ಲಿ ಗಿಡ ಯಾವುದು? ಎರಡು ಪಕ್ಷಿ ಯಾವುವು? ಹಣ್ಣು ಏನು? ಆ ಬೆಳಕು ಯಾವುದು? ಬಂಧನ ಏನು? ಯಾವಾಗ ಮುಕ್ತಿ? ಎಲ್ಲಾ ಆ ದೃಷ್ಟಾಂತದ ಹಿನ್ನೆಲೆ ಯೊಳಗೆ ಚಿತ್ರಿಸಿಕೊಳ್ಳುವುದು ಚಿಂತನ.

ದೃಷ್ಟಾಂತ ನೋಡಿ. ಒಂದು ಗಿಡ ಹಬ್ಬಿಕೊಂಡಿದೆ. ವಿಶಾಲವಾದ ವೃಕ್ಷ. ಅಲ್ಲಿ ಪಕ್ಷಿ ಕುಳಿತಿದೆ. ಅದು ಜೀವ. ಆ ವೃಕ್ಷವೇ ದೇಹ, ಜಗತ್ತು. ಜಗತ್ತಿನಲ್ಲಿ ಜೀವ ಪಕ್ಷಿ ಕುಳಿತಿದೆ. ದೇಹದಲ್ಲಿ ಜೀವಪಕ್ಷಿ ಕುಳಿತಿದೆ. ಈ ಸಮಸ್ತ ವಿಶ್ವವೆಂಬ ಭವ್ಯವೃಕ್ಷದ ಮೇಲೆ ಪಕ್ಷಿ ಕುಳಿತಿದೆ. ವಿಶಾಲವಾದ ಮಹಾವಿಶ್ವದೊಳಗೆ ಸಣ್ಣ ಟೊಂಗೆ, ಅದು ದೇಹ. ಆ ದೇಹದ ಮೇಲೆ ಒಂದು ಪಕ್ಷಿ ಕುಳಿತಿದೆ.





ಭೂಮಿ, ನೀರು, ಅಗ್ನಿ, ವಾಯು, ಆಕಾಶ ಇದು ವಿಶಾಲವಾದ ವೃಕ್ಷ! ವೃಕ್ಷ ಹತ್ತು ದಿಕ್ಕಿನಲ್ಲಿ ಹರವಿದೆ. ಈ ವೃಕ್ಷದೊಳಗೆ ಶಾಖೆಗಳು, ಅಸಂಖ್ಯ ಶಾಖೆಗಳು ! ಅಸಂಖ್ಯ ದೇಹಗಳು ! ಆ ಪ್ರತಿ ಶಾಖೆಯೊಳಗೆ ಹಣ್ಣುಗಳು. ಶಬ್ದ, ಸ್ಪರ್ಶ, ರೂಪ, ರಸ, ಗಂಧಮಯ ಹಣ್ಣು. ಈ ಹಣ್ಣುಗಳು ಮೆತ್ತಿ ಬಿಟ್ಟಿವೆ. ಕಣ್ಣು ತೆರೆದರೆ ಸಾಕು ರೂಪು ಕಾಣಿಸುತ್ತದೆ. ಕಿವಿ ಕೊಟ್ಟರೆ ಧ್ವನಿ ಕೇಳಿಸುತ್ತದೆ. ಮುಟ್ಟಿದರೆ ಮಧುರ ಸ್ಪರ್ಶ. ಎಷ್ಟು ಬಗೆಯ ರಸಗಳು ! ಎಷ್ಟು ಬಗೆಯ ವಾಸನೆ ! ಇದರಿಂದ ಜಗತ್ತು ರಸಪೂರ್ಣ. ಒಂದು ವೇಳೆ ಶಬ್ದ, ರೂಪ, ರಸ ತೆಗೆದು ಹಾಕಿದರೆ ಈ ವೃಕ್ಷ ಅಪ್ರಿಯ ! ಅರಸ, ನೀರಸ ! ಈ ಪಂಚ ಹಣ್ಣುಗಳು ರಸಪೂರ್ಣ, ಆಕರ್ಷಕ.

ರಾವಣ ಸಾಮಾನ್ಯ ಮನುಷ್ಯ ಅಲ್ಲ. ವಿದ್ಯಾವಂತ, ಜ್ಞಾನಿ. ಭಗವಂತನನ್ನೆ ಒಲಿಸಬಲ್ಲ ತಪಸ್ವಿ. ಇಂತಹ ಈತನನ್ನು ಮರಳುಗೊಳಿಸಿತು ರೂಪ! ಹುಚ್ಚು ಹಿಡಿಸಿತು. ಸಾಮಾನ್ಯ ಮನಸ್ಸಿನವರಾದ ನಮ್ಮನ್ನು ಅದೆಷ್ಟು ಹುಚ್ಚು ಹಿಡಿಸಬಾರದು?

ಜಗತ್ತು ಅನ್ನುವ ವೃಕ್ಷದೊಳಗೆ ಇಂತಹ ಐದು ಹಣ್ಣುಗಳು. ಈ ಹಣ್ಣಿನ ಟೊಂಗೆಯ ಮೇಲೆ ಜೀವ ಎನ್ನುವ ಪಕ್ಷಿ ಕುಳಿತಿದೆ. ಕುಳಿತು ತಿನ್ನುತ್ತಿದೆ ಹಣ್ಣನ್ನು. ಕುಳಿತ ದಿನದಿಂದಲೇ ಹಣ್ಣು ತಿನ್ನಲು ಆರಂಭಿಸಿದೆ. ಎಂದು ಈ ಮನುಷ್ಯ ಜಗತ್ತಿಗೆ ಬಂದ, ಅಂದೇ ತಿನ್ನಲು ತೊಡಗಿದ. ತಿನ್ನುವಲ್ಲಿ ಮಗ್ನನಾಗಿದ್ದಾನೆ. ಎಷ್ಟು ಮಗ್ನನಾಗಿದ್ದಾನೆಂದರೆ ಮೇಲಿರುವ ಪಕ್ಷಿ ಕಾಣಿಸುತ್ತಿಲ್ಲ! ತಾನು ಯಾರು ಗೊತ್ತಾಗುತ್ತಿಲ್ಲ. 'ಪುರುಷಃ ನಿಮಗ್ನಃ' ಅವನನ್ನು ಎಚ್ಚರಿಸುವುದೇ ಕಷ್ಟ; ಅಷ್ಟು ಈ ಸಂಸಾರದೊಳಗೆ ಮುಳುಗಿ ಹೋಗಿದ್ದಾನೆ !

ಬುದ್ಧ, ಮಹಾವೀರ, ಶಂಕರಾಚಾರ್ಯ, ಬಸವಣ್ಣ, ಅಲ್ಲಮ ಪ್ರಭು, ಸಂತರು, ಮಹಾನುಭಾವರು ಬಂದರು. ಎಚ್ಚರಿಸಬೇಕೆಂದು ಪ್ರಯತ್ನಿಸಿದರು. *"ಉತ್ತಿಷ್ಠತ, ಜಾಗ್ರತ, ಪ್ರಾಪ್ಯ ವರಾನ್ನಿ ಬೋಧತ"* ಎಂದರು. ಏಳಿ, ಒಂದಿಷ್ಟು ಕಣ್ಣು ಬಿಟ್ಟು ನೋಡಿ, ಶ್ರೇಷ್ಠರ ಬಲ್ಲವರ ಸಮೀಪ ಹೋಗಿ, ಜೀವನ ಉದ್ಧಾರ ಮಾಡಿಕೊಳ್ಳಿ ಎಂದರು. ಇಷ್ಟು ಜನ ಬಂದು ಹೋದರೂ ನಾವು ಹಾಗೇ ಮಲಗಿದ್ದೇವೆ. ಅವರ ಮಾತುಗಳನ್ನು ಕಂಠಪಾಠ ಮಾಡಿದ್ದೇವೆ. ಅಸ್ಖಲಿತವಾಗಿ ನುಡಿಯುತ್ತೇವೆ. ಆದರೆ ಆಚ್ಚರಿಯೆಂದರೆ ನಾವು ಎದ್ದೇ ಇಲ್ಲ. ನಮ್ಮ ನುಡಿಯೆಲ್ಲ ನಿದ್ರೆಯಲ್ಲಿ, ಹಾಸಿಗೆಯಲ್ಲಿ !

ಒಬ್ಬ ಗುರು. ಗುರುವಿನ ಹತ್ತಿರ ಶಿಷ್ಯ. ಇಬ್ಬರೂ ಕೂಡಿ ಹೊರಟ್ಟಿದ್ದರು. ಗುರುವಿಗೆ ನೀರಡಿಕೆ, ಶಿಷ್ಯ ನೀರು ತರಲು ಹೋದ. ಶಿಷ್ಯ ಗುರುವನ್ನು ಒಂದು ಮರದ ಕೆಳಗೆ ನೆರಳಲ್ಲಿ ಕೂರಿಸಿ ತಂಬಿಗೆ ತೆಗೆದುಕೊಂಡು ನೀರು ತರಲು ಹೋದ. ಹೋದ, ಬಹಳ ದೂರ ಹೋದ. ಬಾವಿಯ ಹತ್ತಿರ ಒಬ್ಬ ಹೆಣ್ಣು ಮಗಳು. ಸಣ್ಣವಳು. ಆಕೆ ನೀರನ್ನು ಜಗ್ಗುತ್ತಿದ್ದಳು. ಒಳ್ಳೆಯ ನೀರು. ನೀರು ಕುಡಿವ ಬಯಕೆ. ಆಕೆ ಸುರಿದಳು ಬೊಗಸೆಗೆ. ಆ ನೀರಿನಲ್ಲಿ ಆಕೆಯ ಮುಖ ! ತಾನು ಗುರುವಿನ ಶಿಷ್ಯ ಎನ್ನುವುದನ್ನು ಮರೆತ. ಗುರುವನ್ನೂ ಮರೆತ. ಆಕೆಯ ಹಿಂದೆ ಹೋದ. ಅವಳ ಮನೆಗೆ ಹೋದ. ಆಕೆಯ ತಂದೆಯನ್ನು ಸಂಧಿಸಿ ಹೇಳಿದ, ತನ್ನ ಮನದ ಇಚ್ಛೆಯನ್ನು ! ಶಿಷ್ಯ ಬರುತ್ತಾನೆ, ನೀರು ತರುತ್ತಾನೆ ಎಂದು ಕುಳಿತಿದ್ದಾನೆ ಗುರು. ಶಿಷ್ಯನದು ಸುಂದರ ದೇಹ. ಅವನ ಕಂಡು ಅವನಾಸೆ ತಿಳಿದು ತಂದೆಗೆ ಆನಂದ. ಭಗವಂತನೇ ಕಳುಹಿಸಿಕೊಟ್ಟನು. ಇದು ನಿನ್ನದೇ ಮನೆ. ಇವಳು ನಿನ್ನವಳೇ ಎಂದು ಲಗ್ನ ಮಾಡಿ ಮುಗಿಸಿ ಬಿಟ್ಟ, ಮಕ್ಕಳಾದವು ಒಂದೆರಡಲ್ಲ! ಇನ್ನೂ ನೆನಪಿಲ್ಲ ಗುರುವಿನತ್ತ ಹೋಗಲು. ಇವನನ್ನು ಎಚ್ಚರಿಸಲು ಸಂತರು ಬಂದು ಹೋದರು. ನೆನಪಾಗದು, ಸಂಸಾರ ಹರಿಯದು. ಗುರು ದಾರಿ ಕಾಯುತ್ತ ಕುಳಿತಿದ್ದಾನೆ. ಬರುತ್ತಾನೆ ಶಿಷ್ಯ ಎಂದು!

ಅಂತಹ ವಿರಕ್ತ ಶಿಷ್ಯನೇ ಸಿಕ್ಕಿಕೊಂಡ ! ಇನ್ನು ಆ ವಿಷಯವನ್ನೇ ಹುಡುಕಾಡ ಹೋದವರು? ಆ ಶಿಷ್ಯನ ಹೆಂಡತಿ ಸತ್ತಳು ! ಅಷ್ಟು ಸುಂದರ ಹೆಂಡತಿ ಸತ್ತ ಕೂಡಲೇ ವಿರಕ್ತಿ ಬಂತು ! ನೆನಪಾಯ್ತು; ಗುರುವನ್ನು ಕೂರಿಸಿ ಬಂದುದು ನೆನಪಾಯ್ತು. ಓಡಿ ಬಂದ; ಗುರು ನಿರೀಕ್ಷೆಯಿಂದ ಅಲ್ಲೇ ಕುಳಿತಿದ್ದ ! ಶಿಷ್ಯ ಎಂದಾದರೂ ಬರಲಿ, ಬಂದೇ ಬರುತ್ತಾನೆ ಎಂದು ದಾರಿ ಕಾಯುತ್ತಿದ್ದ ಗುರು. ಅಷ್ಟು ಪ್ರೇಮ ಗುರುವಿನದು !

ಪ್ರಪಂಚದ ಈ ವಿಷಯಗಳನ್ನು ತಿನ್ನುವಾಗ, ಸಂಸಾರ ಮಾಡುವಾಗ, ಮನಸ್ಸು ಇಷ್ಟು ಮರುಳಾಗಿ ಹೋಗುತ್ತದೆ, ಮುಗವಾಗಿ ಹೋಗುತ್ತದೆ. ಎಲ್ಲಿ ಭಗವಂತ? ಎಲ್ಲಿ ಸಂತರು? ನಾವು ಕೆಟ್ಟವರಲ್ಲ, ನಾವು ಒಳ್ಳೆಯವರೇ. ಶಿಷ್ಯ ಒಳ್ಳೆಯವನೇ. ಜಗತ್ತಿನ ಮಾಯಾ ಪ್ರಭಾವವೇ ಅಷ್ಟು ಇರುವಾಗ "ಜಗವ ಸುತ್ತಿರ್ಪುದು ನಿನ್ನಯ ಮಾಯೆ". ಏನು ಮಾಡಲಾದೀತು?

ವಿಷಯ ಫಲ ತಿನ್ನುವಾಗ ಶೋಕವುಂಟಾಗುತ್ತದೆ. ಪ್ರಪಂಚ ಮಾಡುವಾಗ ಒಂದಿಷ್ಟು ಕಷ್ಟಬರುತ್ತದೆ. ಶೋಕಗೊಳ್ಳುತ್ತಾನೆ ಮನುಷ್ಯ. ಆ ಶೋಕ ನೀಗಿಸಲು ಇದು ಭಗವತ್ ಚಿಂತನ ! ವ್ಯಾಕರಣದ ಚಿಂತನೆಯಲ್ಲ. ಇದು ತರ್ಕದ ಚಿಂತನೆಯಲ್ಲ, ಭಾಷಾ ಚಿಂತನೆಯಲ್ಲ. ನಮ್ಮ ಬದುಕಿನತ್ತ ನೋಡಿಕೊಳ್ಳುವ ಕ್ಷಣ ಇದು. ಬದುಕನ್ನು ಸಮೃದಗೊಳಿಸುವ ಪದತಿ !

ಮೇಲೆ ಕುಳಿತ ಪಕ್ಷಿ ಸಾಕ್ಷೀಪಕ್ಷಿಯು. ಈ ಜೀವಾತ್ಮನ ದೃಷ್ಟಿಯಿಂದ ಭಾವಕ್ಕೆ ಬಂದ ಭಗವಂತ ! ನಾನು ಜೀವ ಪಕ್ಷಿ. ಭಗವಂತನ ದೃಷ್ಟಿಯದು ಸಾಕ್ಷಿ ಪಕ್ಷಿ. ಅಂತಹ ಜ್ಞಾನ ಪಕ್ಷಿ ಜಗತ್ತಿನ ಮೇಲೆ ಜ್ಞಾನದ ಬೆಳಕು ಚೆಲ್ಲಿದೆ. ಹಣ್ಣು ಹಂಪಲುಗಳನ್ನು; ಶಬ್ದ, ಸ್ಪರ್ಶ, ರೂಪ, ರಸಾದಿಗಳನ್ನು ಬೆಳಗಿಸುತ್ತದೆ. ಅಂತಹ ಪ್ರಕಾಶ ಚೆಲ್ಲುವ ಭಗವಂತನ ಮೇಲೆ ಶಬ್ದ, ಸ್ಪರ್ಶ, ರೂಪಗಳ ಪ್ರಭಾವ ಇಲ್ಲ. ನಾವು ಆತನನ್ನು ಬಂಗಾರದಲ್ಲಿ ಮುಚ್ಚಿದರೂ ಎಷ್ಟು ವಸ್ತುಗಳನ್ನು ಸಮರ್ಪಿಸಿದರೂ ಭಗವಂತ ಆ ಕಡೆ ನೋಡುವುದಿಲ್ಲ. ನೀವು ಬೇಕಾದರೆ ಸಾದಾ ಅನ್ನ ಅರ್ಪಿಸಿ, ಅಥವಾ ಮೃಷ್ಟಾನ್ನ ಅರ್ಪಣ ಮಾಡಿ, ಯಾವುದನ್ನೂ ಲಿಂಗ ನೋಡುವುದಿಲ್ಲ. ಯಾವಾಗ ಈ ಜೀವ ಮೇಲ್ಮುಖ ಮಾಡಿ ಆ ಸಾಕ್ಷಿಯತ್ತ ಲಕ್ಷ್ಯ ಕೊಡುತ್ತಾನೆಯೋ ಆಗ ಎಲ್ಲೆಡೆ ಹರವಿದ ಪ್ರಕಾಶ ಕಾಣುತ್ತದೆ. ಆ ಪ್ರಕಾಶದ ದರ್ಶನದಿಂದ ಜೀವಪಕ್ಷಿಯ ಮೋಹ ಮರೆಯಾಗುತ್ತದೆ. ಶೋಕ ತಪ್ಪಿ ಹೋಗುತ್ತದೆ. ಜೀವಭಾವವು ಹಾರಿ ಹೋಗುತ್ತದೆ. ಆ ಜೀವ ಕಲ್ಪನೆಯೊಂದಿಗೆ ಈಶ ಕಲ್ಪನೆಯೂ ಮರೆಯಾಗುತ್ತದೆ. ಆಗ ಏನು ಉಳಿಯುವುದೋ ಅದು ಶುದ ಭಗವಂತ !

(ಕೃಪೆ : ಭಗವಚ್ಚಿಂತನ)



# ಶ್ರೀ ಸಿದ್ಧಗಂಗಾ ಕ್ಷೇತ್ರ: ಪರಿಸರ ಮತ್ತು ಈಚಿನ ಶೋಧಗಳು

– ಡಾ. ಎಂ.ಜಿ. ನಾಗರಾಜ್ *

*(ಕಳೆದ ಸಂಚಿಕೆಯಿಂದ)*

## ಚತುರ್ಮುಖ ಶಿವಶಿಲ್ಪ

ಯೋಗಿಮಂಟಪಕ್ಕೆ ಹೋಗುವಲ್ಲಿ ಗೋರಕ್ಷ ಗೋಪುರದ ಕೆಳಗಣ ಗುಡಿಯಲ್ಲಿ ಪಂಚಲೋಹದ ಚತುರ್ಮುಖ ಶಿವಶಿಲ್ಪವು ಕೆಲ ಕಾಲದಿಂದ ಇಡಲ್ಪಟ್ಟಿತ್ತು. ಶ್ರೀ ಸಿದ್ಧಗಂಗಾ ತೀರ್ಥದ ಗವಿಗುಡಿಯ ಎಡಬದಿಗಿದ್ದ ತೆರೆದ ಮಂಟಪದಲ್ಲಿ ಮೊದಲಿಗೆ ಈ ಶಿಲ್ಪವನ್ನಿಟ್ಟು ಶ್ರೀ ಸಿದ್ಧಲಿಂಗ ಶಾಸ್ತ್ರಿಗಳು ಪೂಜೆ ಮಾಡುತ್ತಿದ್ದರು. ಈಗ ಅದನ್ನು ಸುರಕ್ಷಿತವಾಗಿ ಬೇರೆಡೆ ಇರಿಸಲಾಗಿದೆ. ( ಈ ಶಿವಶಿಲ್ಪದ ಬಗ್ಗೆ ಶ್ರೀ ಎಂ. ರೇಣುಕಾರಾಧ್ಯರು ನನ್ನ ಗಮನ ಸೆಳೆದರು).

ಈ ಚತುರ್ಮುಖ ಶಿವಶಿಲ್ಪ ಒಂದು ವಿಶಿಷ್ಟ ಪ್ರಾಚೀನ ಶೈಲಿಯ ಶಿಲ್ಪವಾಗಿದೆ. ಈ ಶಿಲ್ಪದ ಜಟಾಶೈಲಿಯು ಕ್ರಿ.ಶ. ೯೬೮ರ ಶಾಸನೋಕ್ತ ಮಂಗಳೂರಿನ ಕದ್ರಿ ಮಂಜುನಾಥ ಗುಡಿಯ ತ್ರಿಲೋಕೇಶ್ವರ, ಕಂಚಿಯ ವೈಕುಂಠನಾಥ ದೇಗುಲದ ಮೂರ್ತಿಗಳ ಜಟಾಮುಕುಟ ಶೈಲಿಯನ್ನು ಹೋಲುವಂತೆ ಕಾಣಬರುತ್ತದೆ. ಅಂದರೆ ೧೦ನೇ ಶತಮಾನದ ಜಟಾಮುಕುಟ ಶೈಲಿಯನ್ನನುಸರಿಸಿ ರೂಪಿಸಿದ ಶಿಲ್ಪ ಸಿದ್ಧಗಂಗೆಯದೆನ್ನಬೇಕು; ನಾಥಪಂಥೀಯ–ಗೋರಕ್ಷನಾಥೀಯ ಸಂಪ್ರದಾಯಸ್ಥರೋ ಅಥವಾ ಅವರ ವಂಶೀಕರು ಯಾರೋ ಈ ಗಿರಿ ಪ್ರದೇಶದಲ್ಲಿದ್ದು, ಸಿದ್ಧಗಂಗೆಗೆ ಈ ಶಿಲ್ಪವನ್ನು ಯಾವಾಗಲೋ ಕೊಟ್ಟು ಹೋಗಿರಬಹುದೆನಿಸುತ್ತದೆ. ಇನ್ನು ಈ ಶಿಲ್ಪದ ತಾತ್ವಿಕ ವಿವರ ಮುಂದಿನಂತಿದೆ.

ತಾತ್ವಿಕವಾಗಿ ಶಿವನ ಪಂಚವಕ್ತ್ರದ ಆರೋಪದ ವಿವರಣೆಯೂ ಕ್ರಿ.ಪೂ. ೩ನೇ ಶತಮಾನದ ತೈತ್ತರೀಯ ಅರಣ್ಯಕದ ನಾರಾಯಣೋಪನಿಷತ್ತಿನಲ್ಲಿ ಬರುತ್ತದೆ. ಶಿವನ ಪೂರ್ವಮುಖವೇ ತತ್ಪುರುಷ ಮುಖ; ದಕ್ಷಿಣ ಮುಖವೇ ಅಘೋರ ಮುಖ; ಪಶ್ಚಿಮ ಮುಖವೇ ಸದ್ಯೋಜಾತ ಮುಖ; ಉತ್ತರ ಮುಖವೇ ವಾಮದೇವಮುಖ; ಆಕಾಶ ಮುಖವೇ ಈಶಾನ ಮುಖವೆಂದು ಉಪಾಧಿಗಳಿವೆ. ಸದ್ಯೋಜಾತಮುಖಿ ಶಿವನನ್ನು ಭವೋದ್ಭವ, ವಾಮದೇವ ಮುಖಿಯನ್ನು ಸರ್ವಭೂತದಮನ, ಅಘೋರ ಮುಖಿಯನ್ನು ಘೋರ ಘೋರತರ, ತತ್ಪುರುಷ ಮುಖಿಯನ್ನು ಮಹಾದೇವ. ಈಶಾನಮುಖಿಯನ್ನು ಈಶ್ವರನೆಂದು ಪರಿಭಾವಿಸಲಾಗಿದೆ. ಪಾಶುಪತಾಗಮದಲ್ಲಿ ಇದೇ ರೀತಿ ಶಿವನ ಮೊಗಗಳಿಗೆ ಉಪಾಧಿಗಳು ಆರೋಪಿತವಾಗಿವೆ – ವೀರಶೈವ ಸಂಪ್ರದಾಯದಲ್ಲಿ. **ಸದ್ಯೋಜಾತ** ಮುಖದಿಂದ ಉಜ್ಜನಿಯ ದಾರುಕ–ಮರುಳಸಿದ್ಧರು, ವಾಮದೇವ ಮುಖದಿಂದ ಕೇದಾರದ ಶಂಕುಕರ್ಣ–ಏಕೋರಾಮಾರಾಧ್ಯರು, **ಅಘೋರಮುಖ**ದಿಂದ ಕೊಲ್ಲಿಪಾಕೆಯ ರೇಣುಕರು, **ತತ್ಪುರುಷ** ಮುಖದಿಂದ ಶ್ರೀಶೈಲದ ಧೇನುಕ ಪಂಡಿತಾರಾಧ್ಯರು, ಈಶಾನ ಮುಖದಿಂದ ಕಾಶಿಯ ವಿಶ್ವಾರಾಧ್ಯರು ಜನಿಸಿದರೆನ್ನುವುದಿದೆ. ಅದರೆ **ಸುಪ್ರಭೇದಾಗಮ ಪ್ರಕಾಶ**ದಲ್ಲಿ ರೇಣುಕರು ಸದ್ಯೋಜಾತ ಮುಖೋದ್ಭವರೆಂದಿದೆ. (**ಶಿವಾಗಮ ಸೌರಭ** ಪು. ೪೯.) ರಂಭಾಪುರಿ ಪೀಠವು ಈ ಸುಪ್ರಭೇದಾಗಮವನ್ನನುಸರಿಸಿಯೆ ಹೇಳುತ್ತದೆ. ತಾತ್ತ್ವಿಕವಾಗಿ ಈ ಶಿವನಲ್ಲಿ ಪೃಥ್ವಿ, ಅಪ್ಪು, ತೇಜಸ್ಸು, ಅಗ್ನಿ, ವಾಯು, ಆಕಾಶ ಹೀಗೆ ವಿಶ್ವದ ಐದು ಮೂಲ ತತ್ತ್ವಗಳು ಅಡಕವಾಗಿವೆ (ಕೆಲವು ಆಗಮಗಳಲ್ಲಿ–ಸ್ವಯಂಭುವಾಗಮದಲ್ಲಿ ಈ ಬಗ್ಗೆ ವ್ಯತ್ಯಾಸ ಕಾಣುತ್ತವೆ. **ಶಿವಾಗಮ ಸೌರಭ**, ಪು. ೯೬ ಅನುಬಂಧ ಪು. ೯೦ರಲ್ಲಿ ಈ ಮತಭೇದವನ್ನು ಸೂಚಿಸಿದೆ). ಶಿವಧ್ವನಿ ಅರ್ಥಾತ್ ಉಚ್ಚಾರದ ಧ್ವನಿ ಆದಿ ಶಬ್ದ ಸಂಕೇತ. ಆ ಧ್ವನಿ ಕರ್ಣಕ್ಕೆ ಮೂರ್ತಸ್ವರೂಪ, ಕೇಳುವೆಗೆ ಆದಿಸಾಕ್ಷಿ. ಈ ಧ್ವನಿಯೆ 'ಅಕ್ಷರ'ನಾದ ಶಿವನ ವಕ್ತ್ರರೂಪಕ್ಕೆ ನೆಲೆಗೊಡುತ್ತದೆ. ಅಂದರೆ ಶಿವನ ಮೊಗರೂಪಕ್ಕೆ ಎಡೆ ಆಗುತ್ತದೆ. ನಿಷ್ಕಲ ಲಿಂಗದಲ್ಲಿ ಈ ಧ್ವನಿ ಬೆಳಗಿ ಸಕಲನಾಗಿ ವಕ್ತ್ರರೂಪದಲ್ಲಿ ತೇಜೋಮಯನಾಗಿ ವೈಖರೀ ಆಗುವಂಥದ್ದು.

ರಾಜಾವಿಕ್ರಮಾದಿತ್ಯನ ಹಿರಿಯ ಸೋದರ, ಉಜ್ಜಯಿನಿಯ ದೊರೆಯಾಗಿದ್ದ ಭರ್ತೃಹರಿ, ಪತ್ನಿ ವರ್ತನೆಯಿಂದ ಬೇಸತ್ತ, ವಿರಕ್ತನಾಗಿ ನಾಥಸಂಪ್ರದಾಯವನ್ನನುಸರಿಸಿ ಯೋಗಿಯಾದ; ಭರ್ತೃಹರಿಯ ಗುಹೆಯೂ ಮಹಾಕಾಲಕ್ಷೇತ್ರ ಉಜ್ಜಯಿನಿಯಲ್ಲಿದೆ. ಅಲ್ಲಿಯ ಕುಂಭ ಮೇಳದಲ್ಲಿ ಶಿವಸಂಪ್ರದಾಯವು **ನಾಥ** ಪಂಥದಿಂದಾಗಿಯೂ ಪ್ರಸಿದ್ಧಿಗೊಂಡಿದೆ.

* ನಂ. ೨೨೧, 'ಅನರ್ಘ್ಯ, ಶ್ರೀ ಜ.ಚ.ನಿ. ಕೃಪೆ' ೬೮ನೇ ಕ್ರಾಸ್, ೫ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-೫೬೦೦೧೦





ಇಂಥ ಭರ್ತೃಹರಿ ಶಬ್ದಬ್ರಹ್ಮನ ರೂಪಗಳನ್ನು **ಪರಾ, ಪಶ್ಯಂತಿ, ಮಧ್ಯಮಾ ಮತ್ತು ವೈಖರೀ** ಎಂದು ವರ್ಣಿಸುತ್ತಾನೆ. ಶಬ್ದಬ್ರಹ್ಮನನ್ನು ಗುರುತಿಸಲು ಸಾಧ್ಯವಾಗುವ ರೂಪವೆಂದರೆ ವೈಖರೀ. ಯೋಗಸೂತ್ರಗಳ ದೃಷ್ಟಿಯಿಂದ ಅಂತರ್ ಮಾರ್ದನಿಯ ಕೇಳುವೆಯೆ ಇದು ಎಂಬ ಅಭಿಪ್ರಾಯವಿದೆ.

'ಪರಾ' ಎಂಬ ಸೂಕ್ಷ್ಮ ರೂಪವಾದ ನಾದವು ನಾಭಿ ಪ್ರದೇಶದವರೆಗೂ ಚಲಿಸಿದಾಗ ಅದರ ಸಂಬಂಧದಿಂದ ಉಂಟಾಗುವ ಶಬ್ದ; ಶಬ್ದ ಚೇತನದಲ್ಲಿ ಶೂನ್ಯ, ಸಂವಿತ್, ಸೂಕ್ಷ್ಮ ಅವಸ್ಥೆಗಳನ್ನು ದಾಟಿ ಮೂಲಾಧಾರದಲ್ಲಿ 'ಪರಾ' ಆಗಿ ರೂಪ ಪಡೆಯುತ್ತದೆ. ಮಧ್ಯ ಪಶ್ಯಂತಿಯಾಗಿ ಹೃದಯದೆದುರು ಬಂದು ಮಧ್ಯವೂ ಆಗಿ ಉಚ್ಚಾರದಿಂದ ಹೊರಗೆ ಕೇಳಬಲ್ಲ ವೈಖರೀ ಸ್ವರವಾಗುತ್ತದೆ ಎಂಬುದು ಕ.ಕ. ನಿಘಂಟುವಿನ ವಿವರಣೆ. (ಪು. ೫೪೨೦)

ಇದೆಲ್ಲ ಕುಂಡಲಿನಿಯನ್ನು ಜಾಗೃತಗೊಳಿಸುವ ಹಂತವೇ ಆಗುತ್ತದೆ. ಸದ್ಯದ ಚತುರ್ಮುಖ ಶಿವಶಿಲ್ಪದಲ್ಲಿ ನಾಗರಹೆಡೆ, ಶಿವಮೊಗದ ಅರೆ ನಿಮೀಲಿತ ನಯನಗಳು ಹಾಗೂ ತೆರೆದ ರೆಪ್ಪೆಗಳಲ್ಲಿ ಈ ಸಂಕೇತಗಳೆಲ್ಲ ಅಡಗಿರುವಂತಿದೆ. ವೀರಶೈವ ಸಂಪ್ರದಾಯದಲ್ಲಿ ಏಕಾಕ್ಷರ ಶಿವಾಚಾರ್ಯ, ಏಕವಕ್ತ್ರ ಶಿವಾಚಾರ್ಯದಿಂದ ಹಿಡಿದು ಪಂಚಾಕ್ಷರ, **ಪಂಚವಕ್ತ್ರ ಶಿವಾಚಾರ್ಯ** ಸ್ವರೂಪಗಳನ್ನು ಹೇಳುವಲ್ಲಿ ಮೇಲ್ಸೂಚಿತ ತಾತ್ತ್ವಿಕ ಸಂಕೇತಗಳನ್ನು ಪರಿಭಾವಿಸಬಹುದೆನಿಸುತ್ತದೆ.

ಅಕ್ಕಮಹಾದೇವಿ ತನ್ನ ವಚನದಲ್ಲಿ '*ಎನಗೆ ದೇವರ ಒಲವರವುಂಟಮ್ಮ, ಅಗ್ನಿಯೊಳಗಿಪ್ಪರುದ್ರದೇವರು... ಮತ್ತಂ ಸದ್ಯೋಜಾತ ಮುಖದ ಆಚಾರಲಿಂಗ ದೇವರು, ವಾಮದೇವ ಮುಖದ ಶಿವಲಿಂಗದೇವರು, ತತ್ಪುರುಷ ಮುಖದ ಚರಲಿಂಗ ದೇವರು, ಈಶಾನ ಮುಖದ ಪ್ರಸಾದಲಿಂಗ ದೇವರು, ಗಂಭೀರ ಮುಖದ ಘನಲಿಂಗದೇವರು, ದೇವರ ವರವೆಂಯುವ್ಮ...*' ಎಂದಿರುವಲ್ಲಿ ಅಕ್ಕ ಶಿವನ ಪಂಚಮುಖೋದ್ಭವರ ಲಕ್ಷಣಗಳನ್ನು ತಾತ್ತ್ವಿಕವಾಗಿ ಗುರುತಿಸಿರುವಂತಿದೆ. ಈ ಹಿನ್ನೆಲೆಯಲ್ಲಿ ಸದ್ಯದ ಚತುರ್ಮುಖ ಶಿವಶಿಲ್ಪದ ಚಹರೆಗಳನ್ನು ವಿವರಿಸಬಹುದು. ತ್ರಿಲೋಕೇಶ್ವರನಿಂದ ವಿಭಿನ್ನವಾಗಿ ನಾಥಪಂಥದ ಶಿವನಾಗಿ ಇಲ್ಲಿ ಕಾಣುತ್ತಾನೆ. ಬಹುಶಃ ಇಲ್ಲಿದ್ದ ನಾಥಪಂಥ ಪರಂಪರೆಯವರು ಈ ಚತುರ್ಮುಖ ಶಿವನಿಟ್ಟುಕೊಂಡು ಆರಾಧಿಸುತ್ತಿದ್ದು ಅವರ ಕಾಲಾನಂತರ ಈ ಶಿಲ್ಪವು ಇಲ್ಲಿಯೆ ಉಳಿದಿರುವಂತಿದೆ.

ಸದ್ಯದ ಶಿವನ ಜಟಾಮುಕುಟ ಶಿಲ್ಪವು ತುಂಬ ಕಲಾತ್ಮಕವಾಗಿದೆ. ನಾಲ್ಕು ಶಿರಸ್ಸುಗಳಿಗೆ ಇರುವ ಜಟಾಮುಕುಟಗಳು ಕೊನೆಗೆ ಒಂದೆಡೆ ಕೂಡಿಕೊಳ್ಳುತ್ತವೆ. ಗುಂಗುರುಗರಿಗಳ ಏರುಮುಖ ಅಲ್ಲಿ ಕಾಣುತ್ತದೆ. ಫರದೆ ವಸ್ತ್ರ ಮಡಿಕೆಗಳ ಮಾದರಿಯ ಜಟಾಶೃಂಗದ ಹೆರಳುಗಳ ಆಕೃತಿಯು ಇಲ್ಲಿ ಮೂಡಿದೆ. ಜಟೆಯ ಪೂರಿತ ಭಾಗದಲ್ಲಿ (ಮುಂಬದಿ) ಲಿಂಗ ಹಾಗೂ ವಿವಿಧ ಕಲಾಕೃತಿ ಭಾಗಗಳಿವೆ. ಒಂದೊಂದು ಮುಖಕ್ಕೂ ಒಂದೊಂದು ವಿಶಿಷ್ಟ ಲಕ್ಷಣ ಕಾಣಬರುತ್ತದೆ. ನೀಳನಾಸಿಕ, ಅರೆ ನಿಮೀಲಿತ ಧ್ಯಾನಸ್ಥಮೊಗ, ವೈವಿಧ್ಯಮಯ ದೊಡ್ಡವೂ ನೀಳವೂ ಆದ ಕರ್ಣಕುಂಡಲಗಳು ಕಲಾತ್ಮಕ ವೈಶಿಷ್ಟ್ಯದಿಂದಿವೆ. ನಾಲ್ಮೊಗಗಳಲ್ಲಿ ಫಾಲನೇತ್ರವಿರುವ ಈ ವಿರೂಪಾಕ್ಷ ಶಿವ ಒಂದು ಚೇತೋಹಾರಿ ನೋಟದ ಶಿಲ್ಪವಾಗಿದೆ. ಪುಷ್ಪ ಅರೆ ಶರೀರದ ಈ ಶಿಲ್ಪದ ಭುಜವನ್ನು ಸುತ್ತುವರಿದು ಕಲಾತ್ಮಕವಾಗಿ ಮಣಿಸರಗಳು ಹಾದುಹೋಗಿವೆ. ಬಲ ಭುಜದ ಮೇಲೆ ನಾಗನ ಹೆಡೆ ಇದೆ.



ಸಿದ್ಧಗಂಗೆಯ ಚತುರ್ಮುಖ ಶಿವನ ಪಂಚಲೋಹದ ಪ್ರಾಚೀನಶಿಲ್ಪ (ಮುಂಬದಿ)



ಸಿದ್ಧಗಂಗೆಯ ಚತುರ್ಮುಖ ಶಿವನ ಪಂಚಲೋಹದ ಪ್ರಾಚೀನಶಿಲ್ಪ (ಹಿಂಬದಿ)

ನಾಲ್ಕುಮೊಗಗಳ ಪೈಕಿ (ತತ್ಪುರುಷ ಅಥವಾ ಸದ್ಯೋಜಾತ!) ಪೂರ್ವ ಮುಖವು ಶಿಲ್ಪದ ಮುಂಬದಿ ಎಂದು ಭಾವಿಸಬಹುದು. ಬಲಭುಜದ ಮೇಲೆ ಎತ್ತಿದ ನಾಗನಹೆಡೆ ಹಾಗೂ ಎದೆಯುವರಿಗೂ ಚಾಚಿದ ಬಾಲದವರೆಗಿನ ನಾಗನ ಶರೀರವು ಬಳುಕಿ ಡೊಂಕು–ಡೊಂಕಾಗಿ ಹರಡಿದೆ. ಅದರ ಕೆಳಗೆ ಬಲಭುಜ ಮುಖದಲ್ಲಿ ತೋಳಕಂಕಣವು ಚಿತ್ತಾರ ಮಾದರಿಯಲ್ಲಿ ಕಲಾತ್ಮಕ ಉಬ್ಬುಶಿಲ್ಪ ಸೂಚಿಯಾಗಿದೆ. ಎಡಭುಜದಲ್ಲಿಯೂ ಇಂಥದೇ ಚಿತ್ತಾರವಿದೆ. ಎಡಭುಜದಿಂದ ಬಲಕಂಕುಳಿನ ಬುಡದವರೆಗೆ ಮೂರೆಳೆಯ ಶಿವಸೂತ್ರವಿದೆ. ಶಿವನ ಪೂರ್ವಮುಖ ತತ್ಪುರುಷ ಯಾ ಸದ್ಯೋಜಾತ ಮುಖ. ಅದಾಗಿ ಇಲ್ಲಿ ಪ್ರಸನ್ನ ಗಂಭೀರ

ವದನವು ನೀಳನಾಸಿಕದೊಡನೆ ಎದ್ದುಕಾಣುತ್ತದೆ. ಹಣೆಗಣ್ಣಿನ ಮೇಲಿನ ಪಟ್ಟಿಯಲ್ಲಿ **'ಶಿವಲಿಂಗ'**ದಂತೆ ತೋರುವ ಚಿಹ್ನೆಯೂ ಇದೆ; ಚಂದ್ರ ಚಿಹ್ನೆಯೂ ಇದೆ. ಅರೆ ಶರೀರದ ಶಿವನ ಪೂರ್ಣನೋಟ ಇಲ್ಲಿ ಎದ್ದು ಕಾಣುತ್ತದೆ. ಇವನನ್ನು ಚರಲಿಂಗದೇವರೆನ್ನುವುದುಂಟು ! ಮಹಾದೇವನೆನ್ನುವುದುಂಟು.



**ಸಿದ್ಧಗಂಗೆಯ ಚತುರ್ಮುಖ ಶಿವನ ಅಲಂಕೃತ ಕೆತ್ತನೆಯ ಬಲಬುಜದ ಮೇಲೆ ನಾಗರ ಹೆಡೆ (ಮುಂಬದಿ)**

ಪಶ್ಚಿಮ ಮುಖವು ಶಿಲ್ಪದ ಹಿಂಬದಿಯಲ್ಲಿದೆ. ಇದಕ್ಕೂ ಸದ್ಯೋಜಾತ ಮುಖವೆನ್ನುವುದಿದೆ. ಭವೋದ್ಭವನೆನ್ನುವ ಮುಖವಿದು. ಶಿವನೂ ತ್ರಿನೇತ್ರನೆ, ಜಟಾಮುಕುಟದ ಪೂರಿತ (ಮುಂಬದಿ ಕೇಂದ್ರ) ಭಾಗದಲ್ಲಿ ಕಲಾತ್ಮಕ ಗೋಳಭಾಗದಲ್ಲಿ ಶಿವಲಿಂಗ ಸೂಚಕದಂತೆ ರಚನೆ ಕಾಣುತ್ತದೆ. ಪ್ರಸನ್ನ ಗಂಭೀರವದನನೆಸಿದರೂ ತುಸು ತೆರೆದ ಬಾಯಿ ಇವನದು. ಇವನನ್ನು ಆಚಾರಲಿಂಗ ದೇವರೆನ್ನಬಹುದು. ಇವನ ಅರೆ ಶರೀರದಲ್ಲಿ ಕೊರಳ ಸರಗಳು ಭುಜಗಳಲ್ಲಿ ಚಾಚಿ ಹರಡಿವೆ. ನಾಗನಹೆಡೆ ನೋಟಕ್ಕೆ ಎಡ ಭಾಗವೆನಿಸಿ ಭುಜದ ಮೇಲೆ ಎದ್ದು ಕಾಣುತ್ತದೆ.

ಉತ್ತರಮುಖವು ವಾಮದೇವ. ಸರ್ವಭೂತದ ಮನವೆನ್ನುವ ಮುಖ. ಇವನನ್ನು ಶಿವಲಿಂಗ ದೇವರೆನ್ನುವುದುಂಟು. ಇವನು ಪ್ರಸನ್ನ ಗಂಭೀರ. ಇವನಿಗೆ ಅರೆ ನಿಮೀಲಿತ ನಯನಗಳ ವದನ. ಜಟಾಮುಕುಟದ ಮೇಲ್ಭಾಗದಲ್ಲಿ ವೃತ್ತಾಕಾರದ ಪದ್ಮದ ಮೊಗ್ಗುಗಳ ಚಿಹ್ನೆಯಂತೆ ತೋರುವ ರಚನೆ ಇದೆ, ಜಟಾಮುಕುಟದ ಬುಡಕ್ಕೆ ಶಿರದ ತಕ್ಷಣ ಮೇಲ್ಬದಿ ಕೇಂದ್ರದಲ್ಲಿರುವ ಮುಕ್ಕಾಲು ಗೋಳದಂಥ ರಚನೆಯು **'ಕಂಥೆ'**ಯನ್ನು ಹೋಲುವಂತಿದೆ. ಬಹುಶಃ ಶಿವಲಿಂಗದ ಅಲಂಕೃತ 'ರುದ್ರಾಕ್ಷಿ' ಮಣಿಸರ ಆವೃತ ರುದ್ರ ಭಾಗದಂತೆ ಇದ್ದು 'ಶಿವಲಿಂಗ ದೇವರು' ಎನ್ನುವ ಭಾವ ತರುತ್ತದೆ. ನೀಳ ಕರ್ಣಕುಂಡಲವೂ ಇದೆ.

ದಕ್ಷಿಣ ಮುಖವೇ ಅಘೋರಮುಖ. ಘೋರ ಘೋರವೆನ್ನುವುದುಂಟು. **ಅಗ್ನಿಯೊಳಗಿಪ್ಪ ರುದ್ರದೇವರು** ಎನ್ನುವ ಅಕ್ಕನ ಮಾತಿಗೆ ಹೋಲುವಂತಿದೆ. ಶಿಲ್ಪದ ಈ ಭಾಗ ಮೇಲಿನ ಮಾತುಗಳಿಗೂ ಹೊಂದಿಕೆಯಾಗುತ್ತದೆ. ಜಟಾಮುಕುಟದಲ್ಲಿ ಅರ್ಧ ಚಂದ್ರಾಕೃತಿಯ ಚಾಚು ಬಟ್ಟಲಿನಂತೆ ಕಲಾತ್ಮಕಕ ರೂಪಗಳಿವೆ. ಹೀಗೆ ಉಭಯ ಭಾಗಗಳಿದ್ದು ಮಧ್ಯೆ ಮಣಿಸರದಲ್ಲಿ ಅಂಟಿದಂತೆ ವೃತ್ತಕಾರದ ರಚನೆಯಿದೆ. ಒಳಗೆ ಸೀಳು ರಚನೆಯ ಕಾಂಡಗಳಿವೆ. ಇದರ ಕೆಳಗೆ ತಲೆ ಬುರುಡೆ ಹಾಗೂ ಅದರೊಳಗಿನ ಹಲ್ಲು ಎದ್ದು ಕಾಣುತ್ತವೆ. ಬುರುಡೆಯ ಉಭಯ ಭಾಗದಲ್ಲಿ ನಾಗರ ಹೆಡೆಗಳಿವೆ. ಅದರಡಿಯಲ್ಲಿ ಗುಂಗುರು ಕೇಶದ ಸುರಳಿ ಕಲಾತ್ಮಕವಾಗಿದೆ. ಅದರ ಕೆಳಭಾಗವೆ ಹಣೆಯಾಗಿದ್ದು, ಫಾಲನೇತ್ರವಿದೆ. ಈ ತ್ರಿನೇತ್ರ ಶಿವನ ಕಣ್ಣಾಲಿಗಳು ತೆರೆದ ಕಣ್ಣುಗಳಾಗಿ ಹುಬ್ಬುಗಳು ನಿಮಿರಿವೆ. ದೀರ್ಘ ವೃತ್ತಾಕಾರದಲ್ಲಿ ಅಗಲಿಸಿದ ಬಾಯಿ ರೌದ್ರಕ್ಕೆ ಪೋಷಕವಾಗಿದೆ. ಅರಳಿಸಿದ ಮೂಗಿನ ಹೊಳ್ಳೆ ಇದ್ದರೂ, ಅದರ ನೀಳ ನಾಸಿಕತೆ ರುದ್ರ ಸೌಂದರ್ಯವನ್ನು ತೋರಿ ಗಾಂಭೀರ್ಯವನ್ನು ತಂದಿದೆ. ಇವೆಲ್ಲದರ ಜೊತೆಗೆ ಈ ಅಘೋರ ಮುಖಕ್ಕೆ ಅಭಿಮುಖವಾಗಿ ನಾಗರಹೆಡೆ ಭುಜದ ಮೇಲೆ ಎದ್ದು ಕಾಣುತ್ತದೆ. ಅದು ಎಚ್ಚರದ ಸಂಕೇತವೂ ಹೌದು. ತ್ರಯದಿಸೆಯ ಮುಖಗಳಲ್ಲಿ ಧ್ಯಾನಸ್ಥ ಚಹರೆ ಇದೆ. ಅದರ ಜೊತೆಗೆ ಶಿವನ ಎಚ್ಚರದ ಮುಖವಾದ ಈ ಅಘೋರ ಮುಖವು, ಸರ್ಪದ ಹೆಡೆ ಸಂಕೇತಗಳ ಮೂಲಕ ತೋರುವಂತಿದೆ. ಸರ್ಪದೃಷ್ಟಿಯನ್ನು ಎದುರುಗೊಳ್ಳುವ ಮುಖವೇ ಅದಾಗಿದ್ದು **ಜಾಗೃತ** ಜಗತ್ತು ಅರ್ಥಾತ್ ಜಾಗೃತ ಶಿವಲೋಕದ ಸಂಕೇತವೆಂಬಂತಿದೆ. ಸರ್ಪವು ಚತುರ್ಮುಖ ಶಿವನ ಬಲಕ್ಕಿರುವಲ್ಲಿ ಅದು ಆಧಾರ ಪುರುಷ ಸಂಕೇತವಾಗಿದೆ. ಅದು ಕುಂಡಲಿನಿ ಶಕ್ತಿಯ ಎಚ್ಚರದ ಸಂಕೇತವೂ ಹೌದು. ಮನಸ್ಸಂಯಮಿ ಶಿವನ ಶಕ್ತಿಯ ಸಂಕೇತವೂ ಆಗಿದೆ. ಹೀಗಾಗಿ ಈ ಚತುರ್ಮುಖ ಶಿವಶಿಲ್ಪ ಸಿದ್ಧಗಂಗಾ ಕ್ಷೇತ್ರದ ಒಂದು ವಿಶಿಷ್ಟ ಪ್ರಾಚೀನ ಕಲಾಕೃತಿ ಆಗಿದೆ. ಶಿರದಲ್ಲಿ ಜಟಾಸುರುಳಿ ಕಿರೀಟವಿದ್ದು ತುಂಬ ಕಲಾತ್ಮಕವಾಗಿದೆ. ಕಿರೀಟ ಶೈಲಿಯು ಕ್ರಿ.ಶ. ೭-೮ನೇ ಶತಮಾನದ ಚಾಲುಕ್ಯರ ಶಿಲ್ಪಶೈಲಿಯನ್ನು ಹೋಲುತ್ತದೆ. ಅಗಾಗಿ ಇಲ್ಲಿದ್ದ ನಾಥಪಂಥೀಯರ ಅಸ್ತಿತ್ವದ ಸಾಕ್ಷಿ ಎಂಬಂತೆ ಈ ಚತುರ್ಮುಖ ಶಿಲ್ಪವಿದೆ.

ಶಿವನು ಈಶಾನ ಮುಖಿಯಾಗಿ ಅವ್ಯಕ್ತನಾದ ಕಾರಣ ಸಾಮಾನ್ಯವಾಗಿ ಪ್ರತಿಮಾ ರೂಪದಲ್ಲಿ ತೋರಿಸುವುದಿಲ್ಲ. ಅಂತಾಗಿ ಪ್ರತ್ಯಕ್ಷ ರೂಪದಲ್ಲಿ ಸೇರುವಂಥ ಚರ್ತುಮುಖಲಿಂಗ, ಶಿವಶಿಲ್ಪಗಳು ಜನಪ್ರಿಯ. ಸದ್ಯದ ಶಿಲ್ಪ ಪಂಚಲೋಹದ





ಚತುರ್ಮುಖ ಶಿವನ ವಿಶಿಷ್ಟ ಶಿಲ್ಪವೇ ಆಗಿದೆ. ಶಿಲ್ಪದ ಕಿವಿಗಳಲ್ಲಿ ದೊಡ್ಡ ಕರ್ಣಕುಂಡಲಗಳಿರುವುದೂ 'ಯೋಗಿ' ಪಂಥದ ಸಂಕೇತವೇ. ಯೋಗಿ ಶಿವ ಇಲ್ಲಿ ಹೀಗೆ ಕಾಣಿಸಿಕೊಂಡಿದ್ದಾನೆ.

ಮಧ್ಯಪ್ರದೇಶದ ಉಜ್ಜಯಿನಿಯಲ್ಲಿ ೧೨ ವರುಷಕ್ಕೊಮ್ಮೆ ನಡೆಯುವ ಸಿಂಹಾಷ್ಟ ಕುಂಭಮೇಳದ ಸಮಯದ ಯಾತ್ರಾರ್ಥಿಗಳ ಪಂಚಕೋಶ ಮಾತೆಯ ಹಾದಿಯಲ್ಲಿ ಪ್ರಸಿದ್ಧ ಪಿಂಗಳೇಶ್ವರ ದೇಗುಲ ಸಿಗುತ್ತದೆ. ಈ ದೇಗುಲದಲ್ಲಿ ವಿಶಿಷ್ಟ ಚತುರ್ಮುಖ ಹಾಗೂ ನಿಷ್ಕಲರೂಪದ ಪಿಂಗಳೇಶ್ವರ ಶಿವಲಿಂಗವಿದೆ. ಬಾಣಭಾಗದ ಬುಡದಲ್ಲಿ ನಾಲ್ಕೂ ದಿಸೆಗಭಿಮುಖವಾಗಿ, ಶಿವನ ಚತುರ್ಮುಖದ ಉಬ್ಬುಶಿಲ್ಪಗಳಿವೆ. ಇದು ಶಿವನ 'ಸಕಲ'ರೂಪದ ತಾತ್ತ್ವಿಕ ಸಂಕೇತವಾಗಿದೆ. ಈ ಚತುರ್ಮುಖ ಶಿವ ಶರದ ಮೇಲೆ 'ನಿಷ್ಕಲ' ರೂಪದ ಲಿಂಗವಿದ್ದು ಶಿವನ ಅವ್ಯಕ್ತ ಐದನೇ ಮುಖದ ಸಂಕೇತವಾಗಿ ಕಾಣುತ್ತದೆ. ಈ ಸಕಲ-ನಿಷ್ಕಲ ರೂಪದ ಪಂಚಮುಖಿ ಪಿಂಗಳೇಶ್ವರ ಲಿಂಗಕ್ಕೆ ಯಾತ್ರಾರ್ಥಿ ಹೆಂಗಳೆಯರು ಅಮೃತಾಭಿಷೇಕ ಮಾಡಿ ಪೂಜಿಸುತ್ತಾರೆ.



**ಉಜ್ಜಯಿನಿ ಸಿಂಹಾಷ್ಟ ಕುಂಭಮೇಳ ಸಂದರ್ಭದಲ್ಲಿ ಬುಡ ಚತುರ್ಮುಖ ಪಿಂಗಳೇಶ್ವರ ಲಿಂಗಕ್ಕೆ ಕ್ಷೀರಾಭಿಷೇಕ ಪೂಜೆ**



**ಕಣವಿ ವೀರಭದ್ರ ಗುಡಿಯಲ್ಲಿರುವ ವಿಶಿಷ್ಟ ಅಪೂರ್ವ ಪಂಚಮುಖಿ ಶಿವಲಿಂಗ**

ಅಪರೂಪವಾದ ಶಿಲಾ ಶಿಲ್ಪಗಳಲ್ಲಿ ಪಂಚಮುಖಿ ಲಿಂಗ ಕಾಣಬರುತ್ತದೆ. ಭೀತ (ಉತ್ತರ ಭಾರತ) ಎಂಬ ಸ್ಥಳದಲ್ಲಿ ಮಾತ್ರ ಭಾರತದಲ್ಲಿ ಮೊದಲ ಬಾರಿಗೆ ಕ್ರಿ.ಶ. ಸು. ೨ನೇ ಶತಮಾನದ ಪ್ರತ್ಯಕ್ಷ ರೂಪದ ಐದು ಮುಖದ ಲಿಂಗ ಕಂಡು ಬರುತ್ತದೆ ಎಂಬುದು ವಿದ್ವಾಂಸರ ಅಭಿಮತವಾಗಿತ್ತು. ಆದರೆ ಕರ್ನಾಟಕದಲ್ಲಿ ಬಳ್ಳಾರಿ ಜಿಲ್ಲೆ ಹೊಸಪೇಟೆ ಬಳಿ ಕಣವಿ ವೀರಭದ್ರ ಗುಡಿಯಲ್ಲಿ ವ್ಯಕ್ತರೂಪದ ಪಂಚಮುಖಗಳನ್ನೊಳಗೊಂಡ (ಕ್ರಿ.ಶ. ಸು. ೨ನೇ ಶತಮಾನದ) ನಮ್ಮ ಶೋಧದಲ್ಲಿ ಕಂಡುಬಂದಿದೆ. ವಾಸ್ತುವಿನಲ್ಲಿ ಪಂಚವಕ್ತ್ರದ ಸಂಕೇತವಾಗಿ ಪಂಚ ಕಳಶಗಳನ್ನು ದಿಶಾಮುಖಿಗಳಂತೆ ರೂಪಿಸಿರುವುದು ಮಳಲಿ ಗ್ರಾಮದ ಅರ್ಕೇಶ್ವರ ದೇಗುಲದ (ಅಂಕಪ್ಪನ ಗುಡಿ) ಗೋಪುರದಲ್ಲಿ ಕಂಡುಬರುತ್ತದೆ.

ಆಂಧ್ರದ ಸಿದ್ಧವಟಂ ಬಳಿ **ಜ್ಯೋತಿ** ಎಂಬಲ್ಲಿ, ಮಧ್ಯಪ್ರದೇಶದ **ನಚನ** ಎಂಬಲ್ಲಿ ಚತುರ್ಮುಖ ಲಿಂಗಗಳು ಕಂಡುಬರುತ್ತವೆ. ಅಂದರೆ ಮಧ್ಯೆ ಲಿಂಗದ ಬಾಣ ಭಾಗ ಪಾಣಿಪೀಠ ರಹಿತವಾಗಿದ್ದು ಅದಕ್ಕೆ ಅಂಟಿದಂತೆ ಲಿಂಗದ ನಾಲ್ಕು ದಿಸೆಗೆ ಶಿವನ ನಾಲ್ಕು ಮೊಗಗಳು ಇರುತ್ತವೆ. ಬಾದಾಮಿ ಚಾಲುಕ್ಯರ ಕಾಲದ ಮಹಾಕೂಟದಲ್ಲಿ ಪುಷ್ಕರಿಣಿ ಮಂಟಪದಲ್ಲಿ ಈ ರೀತಿ ಚತುರ್ಮುಖ ಲಿಂಗ ಶಿಲ್ಪವಿದೆ. ಗುಜರಾತಿನ ಧರ್ಮಪುರದಲ್ಲಿ ರುದ್ರಾಕ್ಷಿ ಮಣಿಗಳಿಂದಲೇ ನಿರ್ಮಿಸಿರುವ ಬೃಹತ್ ಶಿವಲಿಂಗವಿದೆ. ಬಸವ ಕಲ್ಯಾಣದಲ್ಲಿಯೂ ಬೃಹತ್ ಶಿವಲಿಂಗವು ರೂಪುಗೊಳ್ಳುತ್ತಿದೆ. ಕೋಲಾರದ ಬಳಿಯ ೧೦೮ ಅಡಿಗಳ ಎತ್ತರದ ಶಿವಲಿಂಗವೇ ವಿಶ್ವದ ಬೃಹತ್ ಲಿಂಗವಾಗಿದೆ. ಸುತ್ತಲೂ ಕಿರುಶಿವಲಿಂಗಗಳ ಆವರಣವೇ ಇದೆ.

ಸದ್ಯದ ಸಿದ್ಧಗಂಗೆಯ ಚತುರ್ಮುಖ ಶಿವಶಿಲ್ಪವು ಪೂರ್ಣವಾಗಿ ಅರೆ ಶರೀರದ ವ್ಯಕ್ತರೂಪ(ಸಕಲ)ದಲ್ಲಿ ಶಿವನ ಮೊಗರೂಪಗಳನ್ನೆ ಹೊಂದಿದೆ. ಶಿವಲಿಂಗಕ್ಕೆ ಹೊಂದಿಕೊಂಡಂತೆ ನಾಲ್ಕು ದಿಸೆಯ ಮೊಗವಾಗದೆ ವಿಶಿಷ್ಟ ಪ್ರತ್ಯೇಕ ಶಿವಮುಖಗಳ ನಾಲ್ದಿಸೆನೋಟದ ಸಂಯುಕ್ತ ಶಿವಶಿಲ್ಪವೆನ್ನುವಂತಿದೆ. ಇದು ಕುಂಡಲಿನಿ ಶಕ್ತಿಯನ್ನು ಜಾಗೃತಗೊಳಿಸಿ, ಭಕ್ತಿಯ ಅಂತರರಂಗದ ಅರ್ಪಣ ಧ್ವನಿಯನ್ನು ಮಾರ್ದನಿ ಗೊಳಿಸುತ್ತಲೇ ಹೋಗುವ ದಾರ್ಶನಿಕ ಶಿಲ್ಪವಾಗಿದೆ; ಕ್ರಿಯಾಯೋಗದ ಯೋಗಿ ಶಿವನ ಸಂಕೇತವಾಗಿದೆ ಎನ್ನಬೇಕು.

ಈ ಹಿನ್ನೆಲೆಗಳಲ್ಲಿ ಗಮನಿಸಿದರೆ ಸಿದ್ಧಗಂಗಾ ಕ್ಷೇತ್ರವು ೮-೯ನೇ ಶತಮಾನದ ಮುಂಚೆಯೇ 'ನಾಥ ಸಿದ್ಧ'ರ ನೆಲೆಯಾಗಿತ್ತು ಹಾಗೂ ಆ ಪ್ರಭಾವಕ್ಕೆ ಒಳಗಾಗಿ ತನ್ನ ಚಾರಿತ್ರಿಕ ನೆಲೆಯನ್ನು ಸಾಬೀತುಗೊಳಿಸಿಕೊಂಡು ಬಂದಿತು ಎನ್ನಬಹುದು.

* * *

# ಹರಿಹರನ ಕೃತಿಗಳಲ್ಲಿ ಅಲ್ಲಮ

– ಡಾ. ಉಷಾಕಿರಣ್ *

**ಹಿನ್ನೆಲೆ :**

ಕನ್ನಡ ಸಾಹಿತ್ಯದ ಸುಂದರ ಕತೆಗಾರ ಕವಿ ಹರಿಹರ, ರಗಳೆ ಕಾವ್ಯಪ್ರಕಾರ ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟವಾದ ಸ್ಥಾನ ಪಡೆದುಕೊಂಡಿದ್ದೇ ಹರಿಹರನಿಂದಾಗಿ. ೧೨ನೆಯ ಶತಮಾನದ ಹಲವು ಶರಣರ ಜೀವನ ಚರಿತ್ರೆಗಳನ್ನು ಪೌರಾಣಿಕ ರೋಚಕ ಕಥೆಗಳನ್ನಾಗಿ ಪರಿವರ್ತಿಸಿದ ಹರಿಹರನಿಂದಾಗಿ ಶರಣರ ಭಕ್ತಿ ಕಥೆಗಳು ಜನಮನಗಳ ನಾಲಗೆಯಲ್ಲಿ ನಲಿದಾಡಿ ಶರಣ ಸಂಸ್ಕೃತಿಯನ್ನು ಸಮಾಜದಲ್ಲಿ ನಿರೂಪಿಸಲು ನೆರವಾದವು. ಹರಿಹರ ರಗಳೆ ಕಾವ್ಯಪ್ರಕಾರದ ಮೂಲಕ ಅಲ್ಲಮ, ಬಸವಣ್ಣ, ಅಕ್ಕಮಹಾದೇವಿ ಮುಂತಾದ ಶರಣರನ್ನು ಪೌರಾಣಿಕ ಪಾತ್ರಗಳನ್ನಾಗಿ ಚಿತ್ರಿಸಿದ್ದರಿಂದಾಗಿ ಶರಣರ ಸಮಾಜ ಸುಧಾರಣೆಯ ಕ್ರಾಂತಿಕಾರಿ ವಿಷಯಗಳು ಕಾವ್ಯದಲ್ಲಿ ಪ್ರಕಟವಾಗದೆ ಹೋಗಿದ್ದು ಹರಿಹರನ ರಗಳೆಗಳ ಒಂದು ದೊಡ್ಡ ಕೊರತೆಯೇ ನಿಜ. ಆದರೆ ಶರಣರು ಬಿತ್ತಿಹೋಗಿದ್ದ ಭಕ್ತಿರಸದ ಕಂಪನ್ನು ಸ್ವತಃ ಭಕ್ತ ಕವಿಯಾದ ಹರಿಹರ ತನ್ನ ಕಾವ್ಯದ ಶಕ್ತಿಯನ್ನಾಗಿಸಿಕೊಂಡು ಸಮಾಜದಲ್ಲಿ ಶರಣ ಸಂಸ್ಕೃತಿಯ ಸಂಚಲನಕ್ಕೆ ಕಾರಣನಾಗಿದ್ದಾನೆ. ಹರಿಹರನ ಕಾವ್ಯ ಪ್ರಕ್ರಿಯೆಯಲ್ಲಿ ಮುಖ್ಯವಾಗಿ ಕಾಣುವುದು ಅವನ ಸುಂದರ ಕಥನಶೈಲಿ ಹಾಗೂ ಭಾವಪೂರ್ಣ ಭಕ್ತಿಯ ಅಭಿವ್ಯಕ್ತಿಗಾಗಿ ಬಳಸಲಾದ ಸುಂದರವಾದ ಭಾಷೆಯ ಕ್ರಮ. ಅತ್ಯಪೂರ್ವವಾದ ಕಥನಶೈಲಿ ಮತ್ತು ಚಮತ್ಕಾರ ಪೂರ್ಣವಾದ ಭಾಷೆಯ ಮೂಲಕ ಕವಿ ತನ್ನ ಕಾವ್ಯದಲ್ಲಿ ಭಕ್ತಿರಸಪೂರವನ್ನೇ ಹರಿಸಿದ್ದಾನೆ. ಭಕ್ತಿರಸವೇ ಪ್ರಧಾನವಾಗಿರುವ ಕಾವ್ಯದಲ್ಲಿ ಐತಿಹಾಸಿಕತೆ, ಶರಣರ ಚಾರಿತ್ರ್ಯದ ವಿಶೇಷ ಗುಣಗಳು ಮರೆಯಾಗಿ ಹೋಗಿರುವುದು ಕಂಡುಬರುತ್ತದೆ.

**ಹರಿಹರನು ಚಿತ್ರಿಸಿದ ಅಲ್ಲಮ**

ಹರಿಹರನು ರಚಿಸಿರುವ ಪ್ರಭುದೇವರ ರಗಳೆಯಲ್ಲಿ ಅಲ್ಲಮನನ್ನು ಮೂಲತಃ ಒಂದು ಪೌರಾಣಿಕ ಪಾತ್ರವಾಗಿ ಚಿತ್ರಿಸಲಾಗಿದೆ. ಶಿವನ ಆಣತಿಯ ಮೇರೆಗೆ ಭೂಮಿಯಲ್ಲಿ ಹುಟ್ಟಿ ಕೆಲವು ಕಾಲ ಕಾಮಲತೆಯೊಂದಿಗೆ ಸುಖವಾಗಿದ್ದು ಮನಃ ಶಿವನ ಓಲಗಕ್ಕೆ ಹಿಂತಿರುಗುವ ಆದೇಶ ಹೊತ್ತು ಭೂಮಿಯ ಮೇಲೆ ಅಲ್ಲಯ್ಯನಾಗಿ ಹುಟ್ಟುತ್ತಾನೆ. ಅಲ್ಲಮನ ಹುಟ್ಟು, ಬಾಲ್ಯ, ಪ್ರೌಢಾವಸ್ಥೆಗಳಲ್ಲಿನ ಅವನ ಶಿವಭಕ್ತಿಯನ್ನು ಮನದಣಿಯುವಂತೆ ವರ್ಣಿಸುವ ಅವಕಾಶವನ್ನು ಹರಿಹರ ಸಂಪೂರ್ಣವಾಗಿ ಉಪಯೋಗಿಸಿಕೊಂಡಿದ್ದಾನೆ. ರಸಪೂರ್ಣವಾದ ಶಿವಭಕ್ತಿಯ ವರ್ಣನೆಯೇ ಹರಿಹರನ ಕಾವ್ಯದ ಜೀವಾಳವಾಗಿದ್ದು ಕನ್ನಡ ಸಾಹಿತ್ಯದಲ್ಲಿ ಉತ್ಕೃಷ್ಟವಾದ ಭಾಷೆ ಮತ್ತು ಶೈಲಿಗಳ ಪ್ರಯೋಗದಿಂದಾಗಿ ವಿಶೇಷ ಸ್ಥಾನ ಪಡೆದಿದೆ.

ಮೃದಂಗ ವಿದ್ಯೆಯಲ್ಲಿ ಪರಿಣತನಾದ ಅಲ್ಲಮ ಹಲವಾರು ರಾಗ-ಗತಿಗಳಿಂದ ಮೃದಂಗವನ್ನು ಬಾರಿಸುತ್ತಾ ಶಿವನಿಗೆ ಮೆಚ್ಚುಗೆಯಾಗುವಂತೆ ತನ್ನ ಭಕ್ತಿಯ ಪರಾಕಾಷ್ಠತೆಯನ್ನು ಮೆರೆಯುತ್ತಾನೆ. ಇಂತಹ ಅಲ್ಲಯ್ಯನೆದುರಿಗೆ ಒಂದು ದಿನ ಇದ್ದಕ್ಕಿದ್ದಂತೆ ದೇಗುಲದಲ್ಲಿ ಕಾಮಲತೆಯ ಸುಂದರರೂಪ ಬಂದು ನಿಲ್ಲುತ್ತಲೇ ಆತ ಎಲ್ಲವನ್ನೂ ಮರೆತು ಆಕೆಯ ಮೋಹದಲ್ಲಿ ಕರಗಿ ಹೋಗುತ್ತಾನೆ. ಹಾಗೆಯೇ ಕಾಮಲತೆಯಲ್ಲಿಯೂ ತೀವ್ರವಾದ ಮೋಹ ತುಂಬಿಕೊಳ್ಳುತ್ತದೆ. ಕಾಮಲತೆಯೊಡನೆ ಕೆಲವು ಕಾಲ ಸುಖದ ಅನುಭವದಲ್ಲಿ ಅಲ್ಲಮನ ಮನ ಓಲಾಡುತ್ತದೆ. ಆದರೆ ರಾಹು ಬಡಿದಂತೆ ಕಾಮಲತೆಗೆ ಇದ್ದಕ್ಕಿದ್ದಂತೆ ಒಂದು ದಿನ ಮಹಾಜ್ವರ ಬಂದು ಆಕೆ ತೀರಿಹೋಗುತ್ತಲೇ ಅಲ್ಲಯ್ಯನಲ್ಲಿ ಕಾಮಲತೆಯ ವಿಯೋಗದ ದುಃಖ ತುಂಬಿ ಉಲ್ಬಣಿಸಿ ವಿರಹಾಗ್ನಿಯಲ್ಲಿ ಆತ ದುಃಖಾರ್ತನಾಗುತ್ತಾನೆ. ತೀವ್ರ ಶೋಕದಿಂದ ಗುರಿಯಿಲ್ಲದೆ ಅಲೆಯುತ್ತಿದ್ದ ಅಲ್ಲಯ್ಯನಿಗೆ ಒಂದು ದಿನ ನಡೆಯುತ್ತಿದ್ದ ಹಾದಿಯಲ್ಲಿ **'ತಲೆವಾಗಿ ಕಣ್ಣ ನೀರ್ಗರೆಯೆ ಚಿಂತಿಸುತಂದು ನೆಲನಂ ಬರೆಯೆ ಬೆರಳ ಹೆಜ್ಜೆಯೊಳಗೊಂದು ಮಿನು ಮಿನುಗಿ ಹೊಳೆಹೊಳೆದು ನಸುವೆಳಗು ತೋರುತಂ', 'ಶಿವಜ್ಞಾನಂದಕುರಂದೋರ್ಪಂತೆ'** ತೋರಿದಾಗ ಕೌತುಕದಿಂದ ರಾಜನಿಗೆ ತಿಳಿಸಲು ರಾಜನು ನೆಲವನ್ನು ಅಗೆಸಿ ನೋಡಿದಾಗ ದೇವಾಲಯದ ಮುಚ್ಚಿದ ಬಾಗಿಲು ಕಾಣಿಸಿ ಅದನ್ನು ತೆಗೆಯಲು ಎಲ್ಲರೂ ಹಿಂದೆಗೆದಾಗ ಅಲ್ಲಮನೇ ಮುಂದಾಗಿ ಬಂದು ತೆಗೆದು ನೋಡುತ್ತಾನೆ. ಬಾಗಿಲು ತೆಗೆದು ಶಿವಾಲಯದ ಒಳಹೊಕ್ಕ ಅಲ್ಲಮನಿಗೆ ಹೊರಗಿನ ಲೋಕವೆಲ್ಲ ಮರೆತು ಹೋಗಿ ದೇಗುಲದಲ್ಲಿನ ಶಿವಲಿಂಗಕ್ಕೆ ಅತಿಶಯವಾದ ಭಕ್ತಿ ಉನ್ಮಾದದಿಂದ ನಮಿಸುತ್ತಾನೆ. ಹಾಗೆಯೇ ಪಕ್ಕದಲ್ಲಿ ಕಂಡುಬಂದ ಅನಿಮಿಷಯ್ಯಂಗಳು **'ತೊಲಗದಲುಗದ ಲಿಂಗ ನಿಜಸಿದ್ಧನೊಪ್ಪಿರಲು'** ಇರುವುದನ್ನು ಕಂಡು ಮಹಾಗುರುವನ್ನು ಕಂಡಂತೆ ಆ ಕ್ಷಣದಲ್ಲಿ ಅಲ್ಲಮನಲ್ಲಿ ಪರಿವರ್ತನೆಯಾಗಿ **'ಶಿವಜ್ಞಾನಮಂ ಪುಟ್ಟಿಸಲು'** ಆ ಮಹಾಯೋಗಿ ಕಣ್ದೆರೆದು ಅಲ್ಲಮನನ್ನು ಕಾರಣಿಕನಿವನೆಂದು ಗುರುತಿಸಿ, ಕೈಯೊಡ್ಡಿದ ಅಲ್ಲಮನ ಕೈಗೆ ತನ್ನ ಕೈಯಲ್ಲಿದ್ದ ಶಿವಲಿಂಗವನ್ನು ನೀಡಿ ಪ್ರಾಣತ್ಯಾಗ ಮಾಡುತ್ತಾನೆ. ಗುರುವಿನಿಂದ ದೊರಕಿದ ಇಷ್ಟಲಿಂಗವನ್ನು ಕೈಯಲ್ಲಿ ಹಿಡಿದು ಭಕ್ತಿಪರವಶನಾಗಿ ಲಿಂಗ ಕೊಂಡೊಂದ್ದುತ್ತ ನಡೆಯುತ್ತಾನೆ. ಅಲ್ಲಮನ ಭಕ್ತಿಪರವಶತೆಯನ್ನು ಕಂಡವರು ಕಾಮಲತೆಯ ಮೋಹದಲ್ಲಿ ಸಿಲುಕಿದವನು ಇವನೇ ಏನು ? ಎಂದು ಸಂದೇಹ ಪಡುವಷ್ಟು ಅಲ್ಲಮನಲ್ಲಿ ಪರಿವರ್ತನೆಯುಂಟಾಗಿ, ಗುಣತ್ರಯದಲ್ಲಿ ಬೇರಾಗಿ, ದೇಹಾದಿ ಕರಣಂಗಳನ್ನು ಮೀರಿ ತಾನೇ ತಾನಾಗುವ ತತ್ತ್ವವು ಈತನಿಗೆ ಕರತಲಾಮಲಕವಾಗುತ್ತದೆ. ಕಾಮಲತೆಯ ವಿಯೋಗದ ದುಃಖವನ್ನು ಸಂಪೂರ್ಣ ಮರೆತು ಶಿವಲಿಂಗ ಸುಖದಲ್ಲಿ ಲೀನವಾಗುತ್ತಾನೆ.

ಪರಮಜ್ಞಾನ ಪೂರ್ಣವಾದ ಅಲ್ಲಮ ಅಲ್ಲಿಂದ ಮುಂದೆ ಸಿದ್ಧಪುರುಷನಂತೆ ನಡೆದು ಮಾರ್ಗದಲ್ಲಿ ಬಸವಣ್ಣ, ಸಿದ್ಧರಾಮ ಮತ್ತು ಇತರ ಶರಣರಿಗೆ ಮಾರ್ಗದರ್ಶನ ನೀಡಿ ಶ್ರೀಶೈಲಾಭಿಮುಖವಾಗಿ ನಡೆದು, ಮತ್ತೆ ಕೈಲಾಸಕ್ಕೆ ಹಿಂತಿರುಗುವ ಭಕ್ತಿ ವೈಭವದ ವರ್ಣನೆಯಿಂದ ಪ್ರಭುದೇವರ ರಗಳೆಯ ಕಥೆ ಮುಂದುವರಿದು ಮುಕ್ತಾಯವಾಗುತ್ತದೆ. ಇದರಲ್ಲಿ ಗುರುತಿಸಬಹುದಾದ ಮುಖ್ಯವಾದ ಮೂರು ಘಟ್ಟಗಳಾಗಿ ಅಲ್ಲಯ್ಯನ ಬಾಲ್ಯದಿಂದ ಪ್ರೌಢಾವಸ್ಥೆಯವರೆಗಿನ ಮುಗ್ಧವಾದ ಶಿವಭಕ್ತಿ, ಅನಂತರದ ಕಾಮಲತೆಯ ಸಂಗಸುಖದಲ್ಲಿ ಶಿವಭಕ್ತಿಯ ಮರೆವಿನ ಹಂತ ಮತ್ತು ಕೊನೆಯದಾಗಿ ಗುರುವಿನಿಂದ ಇಷ್ಟಲಿಂಗದ ಆಶೀರ್ವಾದ ಪಡೆದು ವಿರಕ್ತಿಯ ಮೂರ್ತಿಯಾಗಿ ಪರಮಜ್ಞಾನದ ಭಕ್ತಿ ಉತ್ತುಂಗತೆಯೊಡನೆ ಕೈಲಾಸಕ್ಕೆ ನಿರ್ಗಮನವಾಗುವ ಮುಕ್ತತೆ. ಈ ಕಥಾಹಂದರದ ಉದ್ದಕ್ಕೂ ಅಲ್ಲಮ ಒಂದು ಪೌರಾಣಿಕ ಪಾತ್ರವಾಗಿ ಶಿವನ ಆಣತಿಯಂತೆ ಭೂಮಿಯಲ್ಲಿ ಹುಟ್ಟಿ ಕಾಮಲತೆಯೊಡನೆ ಕೆಲವೇ ಕಾಲ ಸುಖದ ಅನುಭವ ಪಡೆದು ಮತ್ತೆ ಪೂರ್ಣ ವೈರಾಗ್ಯಮೂರ್ತಿಯಾಗಿ ಕೈಲಾಸಕ್ಕೆ ನಿರ್ಗಮಿಸುತ್ತಾನೆ. ಒಂದು ದೃಷ್ಟಿಯಿಂದ ಈ ಕಥಾಹಂದರವನ್ನು ಸಾಂಸಾರಿಕ ಸುಖದ ಕ್ಷಣಿಕತೆ ಹಾಗೂ ಅಂತಿಮವಾಗಿ ಅನುಭಾವಪೂರ್ಣವಾದ ಶಿವಜ್ಞಾನ ಸುಖದ ವಿರಕ್ತಿಯೇ ಬದುಕಿನ ಗುರಿಯಾಗಿರಬೇಕೆಂಬ ಕವಿಯ ಉನ್ನತವಾದ ಉದ್ದೇಶವನ್ನು ಸಾರುವ ಪ್ರತಿಮಾ ಕಾವ್ಯವೆಂದು ಇದನ್ನು ಪರಿಭಾವಿಸಬಹುದಾಗಿದೆ.

ಹರಿಹರನು ವರ್ಣಿಸಿರುವ ಅಲ್ಲಮನ ಬದುಕಿನ ಮೂರು ಘಟ್ಟಗಳಲ್ಲಿ ಮೊದಲಿಗೆ ಅಲ್ಲಮನ ಹುಟ್ಟು ಪೌರಾಣಿಕ ಮೂಲದ್ದಾಗಿದ್ದು, ಅನಂತರದ ಪ್ರೌಢಾವಸ್ಥೆಯಲ್ಲಿನ ಕಾಮಲತೆಯ ಪ್ರಸಂಗವು ಅನುಚಿತವಾದ ವರ್ಣನೆಯಿಂದ ಕೂಡಿರುವ ಬಗ್ಗೆ ಬಹಳಷ್ಟು ವಿರೋಧ ಅಭಿಪ್ರಾಯಗಳು ವ್ಯಕ್ತಪಟ್ಟಿವೆ. ಆದರೆ ಮೂರನೆಯ ಘಟ್ಟದಲ್ಲಿ ವರ್ಣಿತವಾಗಿರುವ ಅನಿಮಿಷಯ್ಯಗಳ ದರ್ಶನವು ಗುರುಕಾರುಣ್ಯದ ದರ್ಶನವಾಗಿ ರೂಪಿತಗೊಂಡಿದ್ದು ಅಲ್ಲಮನಿಗೆ ದೊರಕಿದ ಗುರುವಿನ ಅನುಗ್ರಹದ ಮಹತ್ವವನ್ನು ಸಾರುತ್ತದೆ. ಗುರುಕಾರುಣ್ಯ ಪಡೆದು ವೈರಾಗ್ಯದ ಮೂರ್ತಿಯಾದ ಅಲ್ಲಮನನ್ನು ಕಾರುಣಿಕ ಪುರುಷನನ್ನಾಗಿ ಸಿದ್ಧಪಡಿಸುವಲ್ಲಿ ಹರಿಹರ ಯಶಸ್ವಿಯಾಗಿದ್ದಾನೆ. ಸ್ವತಃ ತಾನು ಅನುಭಾವಿ ಕವಿ ಎಂಬುದನ್ನು ಕೂಡ ಹರಿಹರ ಈ ಸಂದರ್ಭದಲ್ಲಿ ಸಿದ್ಧಪಡಿಸಿದ್ದಾನೆ. ಈ ಸಂದರ್ಭದಲ್ಲಿ ವರ್ಣಿಸಲಾದ ಅಲ್ಲಮನ

* ನಂ. ೨, ಟಿ.ಎಸ್.ಕೆ. ರೆಸಿಡೆನ್ಸಿ, ೩ನೇ ಕ್ರಾಸ್, ಅಣ್ಣಯ್ಯಪ್ಪ ಬ್ಲಾಕ್, ಕುಮಾರ ಪಾರ್ಕ್ ವೆಸ್ಟ್, ಬೆಂಗಳೂರು-೫೬೦೦೨೦





ಭಾವಪೂರ್ಣತೆ, ಭಕ್ತಿ ವಿರಕ್ತಿಗಳು ಹರಿಹರನ ಸ್ವಯಂ ಅನುಭಾವಿ ಮನಸ್ಸಿನ ಕನ್ನಡಿಗಳಾಗಿವೆ. ಇಲ್ಲಿ ಬಳಸಿದ ಭಾಷೆಯ ಶ್ರೀಮಂತಿಕೆ ಅಪೂರ್ವವಾಗಿದ್ದು, ಕನ್ನಡ ಕಾವ್ಯ ಸಾಹಿತ್ಯದ ಸುಂದರ ನುಡಿಗಳ ಅಗಣಿತ ಗಣಿಯಾಗಿದೆ.

ಅಲ್ಲಮ ಅನಿಮಿಷಯ್ಯ ಗುರುವನ್ನು ಕಂಡ ಮೊಟ್ಟಮೊದಲ ನೋಟದಲ್ಲಿ **'ಬತ್ತಿಯಿಲ್ಲೆಣ್ಣೆಯಿಲ್ಲದ ದೀಪ್ತಿ ಬೆಳಬೆಳಗೆ ಸುತ್ತಲುಂ ಶಿವಕಳೆಯ ತಂಬೆಳಗು ತೊಳತೊಳಗೆ ತಿಳಿದ ನಿರ್ಮಳಜಳದ ಘನದ ಬೆಳಗೆಂತಂತೆ'** ಮುಂತಾದ ಪದಪುಂಜಗಳು ಕಾವ್ಯದಲ್ಲಿ ತಾನೇತಾನಾಗಿ ಮೂಡಿಬಂದಂತೆ ಕಾವ್ಯದುದ್ದಕ್ಕೂ ಇದೇ ಬಗೆಯ ಭಾಷೆಯ ಬೆಡಗು ಬೆರಗುಗೊಳಿಸುತ್ತದೆ. ಓದುಗರ ಕುತೂಹಲವನ್ನು ತಣಿಸುತ್ತದೆ. ಅನುಭಾವಿಕ ರಸವನ್ನು ಹರಿಸುತ್ತದೆ. ಭಕ್ತಿಪರವಶತೆಯನ್ನು ಭಾವಪೂರ್ಣವಾಗಿ ಅಭಿವ್ಯಕ್ತಗೊಳಿಸುತ್ತವೆ. ಹರಿಹರನ ಈ ಭಾಷಾ ಚಮತ್ಕಾರ ಕನ್ನಡ ಸಾಹಿತ್ಯದ ಒಂದು ಅಚ್ಚರಿಯಾಗಿದೆ. ಇದು ಕವಿಯ ಕಥನಶೈಲಿಯ ಜೀವಾಳವೂ ಆಗಿದೆ. ಗುರುವನ್ನು ನೋಡಿದ ಕ್ಷಣ ಅಲ್ಲಮನಲ್ಲಿ **'ಸಾತ್ವಿಕ ರಸಂ ಪುಟ್ಟಿ ಕಂಪಿಸುತೆ ಸನ್ನಿಧಿಯ ಗುಣ ಶಿವಜ್ಞಾನಮಂ ಪುಟ್ಟಿಸಲು'** ಇದು ಕವಿಯ ಕಥನಶೈಲಿಯ ಚಮತ್ಕಾರ ಗುಣವಾಗಿ ಮೂಡಿಬಂದಿದೆ. 'ನೋಟದೊಳು ಲಿಂಗವಂ ಸೆರೆಗೆಯ್ದು ಶಿವಯೋಗಿ ಕೂಟದೊಳು ಕಣ್ಣೆ ತನುವಾದ ಬೆಳಗಿನ ಯೋಗಿ' ಈ ಎಲ್ಲ ಪದಗಳು ಅತ್ಯಂತ ಉಚಿತ ರೀತಿಯಲ್ಲಿ ಬಳಕೆಯಾಗಿ ಅನಿಮಿಷಯ್ಯನ ದಿವ್ಯತೆಯನ್ನು ಕಾಣುವ ಅಲ್ಲಮನ ದಿವ್ಯನೋಟದ ದರ್ಶನಕ್ಕೆ ಪೂರಕಗಳಾಗಿವೆ. ಶಿವಜ್ಞಾನ ಸುಖದ ಅನುಭವವನ್ನು ಪಡೆದ ಅಲ್ಲಮ ಚಮತ್ಕಾರ ರೂಪದಲ್ಲಿ ಪರಿವರ್ತಿತಗೊಳ್ಳುತ್ತಾನೆ. **'ಅಂಗೈಯೊಳಮೃತ ಫಳಮಂ'** ಪಡೆದವನಾಗಿ ಲಿಂಗ ಕೊಂಡೊಯ್ದತ್ತ ಸಾಗಿದ ಅಲ್ಲಮ ತಾನು ಪಡೆದ ಜ್ಞಾನದ ಬೆಳಕನ್ನು ಜಗತ್ತಿಗೆ ಸಾರುವ ಕಾರುಣ್ಯಮೂರ್ತಿಯಾಗಿ ಕರ್ತವ್ಯ ನಿರ್ವಹಿಸಿ ಕೊನೆಗೆ ಕೈಲಾಸ ಸೇರುವ ಸಂದರ್ಭ ಸುಂದರವಾಗಿ ವರ್ಣನಾಮಯವಾಗಿ ಮೂಡಿಬಂದಿದೆ. ಅಲ್ಲಮನು ಅಂತಿಮ ದಿವ್ಯರೂಪವನ್ನು ಸಾರುವುದೇ ಕವಿ ಹರಿಹರನ ಮೂಲ ಉದ್ದೇಶವಾಗಿ ಕಾವ್ಯ ಸಾರ್ಥಕವಾಗಿದೆ. ಆದರೆ ದುರದೃಷ್ಟಕರವೆಂಬಂತೆ ಅಲ್ಲಮನ ಲೋಕಕಾರುಣ್ಯದ ಘಟನೆಗಳು ಹರಿಹರನ ಕಾವ್ಯದಲ್ಲಿ ನಿರೂಪಣೆಯಾಗದೆ ಹೋಗಿದ್ದರಿಂದ ಅನುಭವ ಮಂಟಪದಲ್ಲಿ ಬಸವಣ್ಣ ತನ್ನ ಗುರುವನ್ನು ಬರಮಾಡಿಕೊಳ್ಳುವ **'ಮನದೊಡೆಯ ಮನೆಗೆ ಬಂದರೆ ಕನಕದ ತೋರಣವ ಕಟ್ಟಿ'** ಎಂದ ಸಂಭ್ರಮಪಡುವ ಗುರುಶಿಷ್ಯರ ಮಿಲನದ ಮಹತ್ವದ ಸಂಗತಿಗಳು ಹರಿಹರನ ಕಾವ್ಯ ಕುಸುರಿಯಲ್ಲಿ ಮೂಡದೆ ಹೋಗಿರುವುದು ಕಾವ್ಯ ಸಾಹಿತ್ಯಲೋಕದ ನಷ್ಟವೆಂದೇ ಹೇಳಬೇಕು. ಅಲ್ಲದೆ, ಜ್ಞಾನಯೋಗಿ ಎನಿಸಿದ ಅಲ್ಲಮಪ್ರಭುವಿನಿಂದ ಸಿದ್ಧರಾಮ, ಚೆನ್ನಬಸವಣ್ಣ, ಮುಕ್ತಾಯಿ, ಮಹದೇವಿಯಕ್ಕ ಮುಂತಾದ ಎಷ್ಟೋ ಶರಣ-ಶರಣೆಯರು ತಮ್ಮ ತಮ್ಮ ಸಾಧನೆಯ ಮಾರ್ಗದಲ್ಲಿನ ಸಂದೇಹಗಳಿಗೆ ಉತ್ತರ ಕಂಡುಕೊಂಡ ಮಹತ್ವದ ಸಂಗತಿಗಳು ಬಿಟ್ಟು ಹೋಗಿರುವುದು ಪ್ರಭುದೇವರ ರಗಳೆ ಅಪೂರ್ಣವಾಗಿದೆ ಎನಿಸುವಂತಹ ಲೋಪಕ್ಕೆ ಕಾರಣವಾಗಿದೆ. ಹರಿಹರ ಅಲ್ಲಮನ ಪೌರಾಣಿಕ ಕಥನಕ್ಕೆ ಪ್ರಾಶಸ್ತ್ಯ ಕೊಟ್ಟಿರುವುದರಿಂದಾಗಿ ಈ ಬಗೆಯ ಲೋಪವಾಗಿದೆ ಎಂಬ ಅಭಿಪ್ರಾಯಗಳು ಈ ಬಗ್ಗೆ ಮೂಡಿರುವುದು ಸಹಜವಾಗಿದೆ.*

ಹರಿಹರನ ಇತರ ಯಾವುದೇ ಕೃತಿಗಳಲ್ಲಿಯೂ ಸಹ ಅಲ್ಲಮನ ಹೆಸರು ತೀರಾ ಸಂಕ್ಷಿಪ್ತವಾಗಿ ಕಂಡುಬಂದಿದ್ದು ಮುಖ್ಯ ಘಟನೆಗಳು ಎಲ್ಲಿಯೂ ವಿಸ್ತಾರವಾಗಿ ಬಂದಿರುವುದಿಲ್ಲ. ಪುಷ್ಪರಗಳೆ ಮತ್ತು ಲಿಂಗಾರ್ಚನೆ ರಗಳೆಗಳಲ್ಲಿ ಹರಿಹರ ಶಿವಪೂಜಾ ವಿಧಿಯಲ್ಲಿ ಎಲ್ಲ ಶರಣರ ಹೆಸರನ್ನು ಸ್ಮರಿಸುವಂತೆ ಶರಣರ ಪಟ್ಟಿಯಲ್ಲಿ ಅಲ್ಲಮನ ಹೆಸರೂ ಸೇರಿದೆಯೇ ಹೊರತು ಗುರುಸ್ಥಾನದಲ್ಲಿ ಗುರುತಿಸಿರುವುದಿಲ್ಲ. ಭೃಂಗೀಶ ರಗಳೆ ಮತ್ತು ಕಲಿಕಾಮದೇವರ ರಗಳೆಗಳಲ್ಲಿ **'ಅಲ್ಲಮನ ಕೈಯೊಕ್ಕ ಪರಿಗಳಂ'** ಹಾಗೂ 'ವಸುಧೆಯೊಳಲ್ಲಮಂ ಕೈಯಿಂದ ಬಿಟ್ಟನೆ' ಎಂಬ ಅಲ್ಲಮನ ಕೈಗೆ ಶಿವಲಿಂಗ ಬಂದೊದಗಿದ ಘಟನೆಯನ್ನಷ್ಟೇ ಸೂಚಿಸಿದ್ದಾನೆ. ಇನ್ನು ಬಸವರಾಜದೇವರ ರಗಳೆಯಲ್ಲಿ ಕೂಡ 'ಬಂದು ಬಸವಂಗೆ ಶಿವಲಿಂಗದನುವಂ ತೋರಿ ನಿಂದಿರದೆ ಹೋದನಾ ಕದಳಿಗೆ ಮನಂ ಮೀರಿ' ಎಂದು ತೀರಾ ಸಂಕ್ಷಿಪ್ತ ರೀತಿಯಲ್ಲಿ ಘಟನೆಯನ್ನು ಆತುರದಲ್ಲಿ ಮೊಟಕುಗೊಳಿಸಿದಂತೆ ಕಾಣುತ್ತದೆ. ಅಕ್ಕಮಹಾದೇವಿಯ ರಗಳೆಯಲ್ಲಿ ಅಲ್ಲಮನ ಹೆಸರೂ ಸಹ ಬಾರದೆ ಇರುವುದು ಆಶ್ಚರ್ಯಕರವೇ ಆಗಿದೆ. ಹಾಗೆಯೇ ವಚನ ಸಾಹಿತ್ಯದಲ್ಲಿ ಕಾಣಬರುವ ಅಲ್ಲಮನ ವ್ಯಕ್ತಿತ್ವ ಚಿತ್ರಣ ಆತ ಸಿದ್ಧಪುರುಷನಾದ ನಂತರದ ಘಟನೆಗಳನ್ನು ಮಾತ್ರ ನಿರೂಪಿಸುತ್ತದೆ. ಎಲ್ಲ ವಚನಕಾರರು ಅಲ್ಲಮನನ್ನು ಶೂನ್ಯಸಿಂಹಾಸನಾಧೀಶ ಗುರುವೆಂಬ ರೂಪದಲ್ಲಿ ಕಂಡು, ಜ್ಞಾನಯೋಗಿ ಗುರುವಿನಿಂದ ಜ್ಞಾನದ ಬೆಳಕನ್ನು ಕಂಡಿದ್ದಾರೆ. ಅಲ್ಲಮನ ಸಮಕಾಲೀನರಾಗಿ ಬಾಳಿ ವಚನ ರಚನೆ ಮಾಡಿದ ಎಲ್ಲ ಶರಣರ ವಚನಗಳಲ್ಲಿ ಅಲ್ಲಮನ ಅನುಭಾವಿ ವ್ಯಕ್ತಿತ್ವದ ನಿರೂಪಣೆ ಇದೆಯೇ

* ಆದರೆ ಪ್ರಭುದೇವರ ರಗಳೆಯಲ್ಲಿ ಅಲ್ಲಮ ಸಿದ್ಧರಾಮನನ್ನು ಸಂಧಿಸಿ 'ಕಲಿಯುಗಂ ಪೊಲ್ಲೆಂದು ಬುದ್ಧಿಯಂ ಪೇಳುತಂ ಸಲೆಗೊಪಗೆ ನಡೆವುದೆಂದೊಲುಮೆಯಿಂತೋರಯ' ಎಂದು ಹರಿಹರನೆ ಹೇಳಿದ್ದಾನೆ.







ಹೊರತು ಆತನ ಪೂರ್ವಾಶ್ರಮದ ಬದುಕಿನ ಬಗ್ಗೆ ಯಾವುದೇ ಅಂಶ ಕಂಡುಬರುವುದಿಲ್ಲ. ಭಕ್ತಿ ಭಂಡಾರಿಯಾದ ಬಸವಣ್ಣ ಅಲ್ಲಮನ ಬರವಿನಿಂದ ಜಂಗಮದ ಬರವಿನಷ್ಟೇ ಹರ್ಷಿತನಾಗಿ, **'ಜಂಗಮ ಮುಖ ಲಿಂಗವಾಗಿ ಬಂದು ಎನ್ನ ರಕ್ಷಿಸಿ, ಶಿಕ್ಷಿಸಿ, ಎನ್ನ ಸಂಸಾರದ ಪ್ರಕೃತಿಯ ಹರಿದ'** ಎಂದು ತನ್ನ ವಚನದಲ್ಲಿ ಪ್ರಭುವನ್ನು ಸ್ಮರಿಸಿದ್ದಾನೆ. **'ಭಕ್ತಿಯ ಪಥವ ತೋರ ಬಂದನಯ್ಯಾ ಪ್ರಭುದೇವರು'** ಎಂದು ಚೆನ್ನಬಸವಣ್ಣನ ವಚನ ಹೇಳಿದಂತೆ ಅಕ್ಕ **'ಎನ್ನ ಜ್ಞಾನ ಪ್ರಭುದೇವರ ಧರ್ಮ'** ಎಂದು ಪ್ರಭುವಿಗೆ ಶರಣಾಗಿದ್ದಾಳೆ. **'ಎನ್ನ ಭಾವ ಶುದ್ಧವಾಯಿತು ಪ್ರಭುದೇವರಿಂದ'** ಎಂದು ಸಿದ್ಧರಾಮನ ವಚನ ಹೇಳುತ್ತದೆ. ಹೀಗೆ ವಚನ ಸಾಹಿತ್ಯದಲ್ಲಿ ಕಂಡುಬರುವ ಈ ಅಂಶಗಳು ಹರಿಹರನ ಕೃತಿಗಳಲ್ಲಿ ಕಾಣುವುದಿಲ್ಲವಾದರೂ ಅಪೂರ್ವವಾದ ಭಾಷಾಪ್ರಯೋಗ ಕಥನಶೈಲಿಗೆ ಹರಿಹರನ ರಗಳೆಗಳು ಹೆಸರಾಗಿವೆ.

## ಅನುಭಾವಿ ಅಲ್ಲಮ

ಅಲ್ಲಮನನ್ನು ಅರಿಯುವಲ್ಲಿ ಹರಿಹರನ ಕೃತಿ ಒಂದು ದಿಗ್ದರ್ಶನ ಮಾತ್ರ ಎಂದು ಡಾ. ಎಸ್.ಎಂ. ವೃಷಭೇಂದ್ರಸ್ವಾಮಿ ಹೇಳಿದ್ದಾರೆ. 'ಸಾಸಿವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ' ಎಂದು ಹೇಳಿರುವ ಅಲ್ಲಮ ಅನುಭಾವದ ಮೆಟ್ಟಿಲುಗಳನ್ನೇರಿ ಜ್ಞಾನಯೋಗಿ ಪ್ರಭುದೇವನಾಗಿ ಪರಿವರ್ತಿತಗೊಂಡ ನಂತರದ ವಚನ ರಚನೆಗಳನ್ನು ನೋಡಿದಾಗ ಲೋಕಕ್ಕೆ ಬೆಳಕಾಗುವ 'ಮಾತೆಂಬುದು ಜ್ಯೋತಿರ್ಲಿಂಗ', 'ಭೂಮಿ ನಿನ್ನದಲ್ಲ ಹೇಮ ನಿನ್ನದಲ್ಲ', 'ಹಾಲನೇಮ ಹಿಡಿದವ ಬೆಕ್ಕಾಗಿ ಹುಟ್ಟುವ', 'ಸತ್ಯವೆಂಬುದೇ ಸತ್‌ಶೀಲ', 'ವ್ರತ ಕೆಡಲಿಕೇನು ಹಾಲಿಂಬಲವೇ', 'ಮನದ ಮುಂದಣ ಆಸೆಯೇ ಮಾಯೆ ಕಾಣಾ' ಇಂತಹ ಮಾರ್ಗದರ್ಶಕ ನುಡಿಗಳನ್ನು ನೀಡಿದ ಅಲ್ಲಮನ ವ್ಯಕ್ತಿತ್ವದ ಘನತೆಯ ಅರಿವಾಗುತ್ತದೆ. 'ನೆನಹು ಸತ್ತಿತ್ತು ಭ್ರಾಂತು ಬೆಂದಿತ್ತು' ಎನ್ನುವ ಅಲ್ಲಮನ ನುಡಿಗಳು ಅವನ ಬದುಕಿನ ಪರಿವರ್ತನೆಯ ಸಾಧನೆಯ ಉತ್ತುಂಗ ಮಟ್ಟವನ್ನು ಹೇಳುತ್ತವೆ. ಇಂತಹ ಸಾಧನೆಯಾದಲ್ಲದೆ **'ಹರಿವ ನದಿಗೆ ಮೈಯೆಲ್ಲ ಕಾಲು'** ಎಂಬಂತಹ ಬೆಡಗಿನ ಅರಿವನ್ನು ಲೋಕಕ್ಕೆ ಹೇಳುವುದು ಸಾಧ್ಯವಾಗದು. 'ಮಣಿಯನೆಣಿಸಿ ಕಾಲವ ಕಳೆಯಬೇಡ', 'ಲಿಂಗವ ನೆನೆನು ಫಲವೇನು, ನೆನೆದಲ್ಲದೆ ಸಿದ್ಧಿಸದು' ಎಂಬ ಮಹತ್ವದ ಕಾಣ್ಕೆಗಳು ಸಾಮಾನ್ಯರಿಗೆ ಸಿದ್ಧಿಸುವಂತಹವಲ್ಲ. ಅರಿವಿನ, ಜ್ಞಾನದ ಬೆಳಕನ್ನು ಮನುಕುಲಕ್ಕೆ ನೀಡಿದ ಅಲ್ಲಮ 'ಅರಿವರತು ಬೆರಗು ಹೊಡೆದು ಕುರುಹುಗೆಟ್ಟವನ, ಬಂದ ಬಟ್ಟೆಯಲ್ಲಿ ಬಾರದೆ ಹೋಹವನ' ಎಂದು ಹೇಳಿರುವುದು ತನ್ನ ಅಂತರಂಗವನ್ನೇ ತೆರೆದಿಟ್ಟಂತಾಗಿದೆ. ಹಾಗೆಯೇ ಆತನ ಅನುಭಾವದ ಸಾಧನೆಗೆ ಕೆಳಗಿನ ವಚನ ಒಂದು ನಿದರ್ಶನವಾಗಿದೆ.

*ಬಯಲು ಬಯಲನೆ ಬಿತ್ತಿ ಬಯಲು ಬಯಲನೆ ಬೆಳೆದು*
*ಬಯಲು ಬಯಲಾಗಿ ಬಯಲಾಯಿತ್ತಯ್ಯಾ*
*ಬಯಲ ಜೀವನ, ಬಯಲ ಭಾವನೆ,*
*ನಿಮ್ಮ ಪೂಜಿಸಿದವರು ಮುನ್ನವೆ ಬಯಲಾದರು*
*ನಾ ನಿಮ್ಮ ನಂಬಿ ಬಯಲಾದೆ ಗುಹೇಶ್ವರಾ.*

'ಷಡುಲೋಭದ ರುಚಿ ಹಿಂಗಿ ಜಂಗಮವಾದುದಲ್ಲದೆ ಭವ ಹಿಂಗದು' ಎಂದು ನಿಜವಾದ ಜಂಗಮತ್ವದ ಸಾಧನೆಯ ವಿಧಾನವನ್ನು ತಿಳಿಹೇಳಿದ ಅಲ್ಲಮ ಹಿಂದಣ ಹೆಜ್ಜೆಯನ್ನು ಕಂಡಲ್ಲದೆ ನಿಂದ ಹೆಜ್ಜೆಯನರಿಯಬಾರದು ಎಂದು ಮಾನವ ಜೀವನದ ಹಿಂದು, ಇಂದು, ಮುಂದುಗಳ ಅರಿವನ್ನು ನೀಡಿರುವುದು ಅಸಾಮಾನ್ಯವಾದ ಅರಿವಿನ ಮಿಂಚನ್ನು ಹರಿಸುತ್ತದೆ.

*ಅರಿವು, ಅರಿವು ಎನ್ನುತಿಪ್ಪಿರಿ, ಅರಿವು ಸಾಮಾನ್ಯವೆ?*
*ಹಿಂದಣ ಹೆಜ್ಜೆಯ ನೋಡಿ ಕಂಡಲ್ಲದೆ,*
*ನಿಂದ ಹೆಜ್ಜೆಯನರಿಯಬಾರದು*
*ಮುಂದಣ ಹೆಜ್ಜೆಯಳಿದಲ್ಲದೆ, ಒಂದು ಪಾದ ನೆಲೆಗೊಳ್ಳದು*
*ನೆಲನ ಬಿಟ್ಟು ಆಕಾಶದಲ್ಲಿ ನಿಂದು, ಮುಗಿಲೊಳಗೆ ಮಿಂಚಿದಲ್ಲದೆ*
*ತಾನಾಗಬಾರದು, ಗುಹೇಶ್ವರನೆಂಬುದು ಬರಿದೆ ಬಹುದೆ ಹೇಳಿರೆ?*

ಅಪೂರ್ವ ಅನುಭಾವದ ಬೆರಗಿನ ಕವಿ ಅಲ್ಲಮನನ್ನು ತಿಳಿಯಲು ಎಷ್ಟೋ ಪ್ರಯತ್ನಗಳು ನಡೆದಿರಬಹುದು. ಆದರೂ ಶ್ರೀ ಬಸವರಾಜ ಪುರಾಣಿಕರು ಹೇಳುವಂತೆ 'ಅಲ್ಲಮನ ಭೂಮ ವ್ಯಕ್ತಿತ್ವ ಅನಾವರಣಗೊಂಡಿದೆಯೇ?' ಎಂಬುದು ಅಲ್ಲಮನನ್ನು ಕುರಿತು ಚಿಂತನಶೀಲರು ಇನ್ನೂ ನಡೆಸಬೇಕಾಗಿರುವ ಅಧ್ಯಯನಗಳ ಸಾಧ್ಯತೆಯ ಅಗಾಧತೆಯನ್ನೇ ಹೇಳುತ್ತದೆ. ಅಲ್ಲಮನನ್ನು ತಿಳಿಯದ ಹೊರತು ಅನುಭಾವವಾಗಲೀ, ಕಾವ್ಯಸಾಹಿತ್ಯವಾಗಲೀ, ಧಾರ್ಮಿಕ ಆಧ್ಯಾತ್ಮಿಕ ಚಿಂತನೆಗಳ ಅರಿವಾಗಲೀ ಪೂರ್ಣವಾಗಲಾರದು.

**ಪರಾಮರ್ಶನ ಗ್ರಂಥಗಳು :**
೧. ಫ.ಗು. ಹಳಕಟ್ಟಿ (ಸಂ.) ಹರಿಹರ ಕೃತ 'ಪ್ರಭುದೇವರ ರಗಳೆ'
೨. ಎಸ್.ಎಂ. ವೃಷಭೇಂದ್ರಸ್ವಾಮಿ, 'ಕನ್ನಡ ಸಾಹಿತ್ಯದಲ್ಲಿ ಅಲ್ಲಮಪ್ರಭುದೇವ', ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
೩. ಬಸವರಾಜ ಪುರಾಣಿಕ, 'ಅನುಪಮ ಚರಿತ ಅಲ್ಲಮ ಪ್ರಭುದೇವ', ಬಸವ ಸಮಿತಿ, ಬೆಂಗಳೂರು

*(ಕೃಪೆ: ಯಮಳ ಜ್ಯೋತಿಗಳು)*



# ವಚನ ಚಳುವಳಿಗಳು

- ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ *

ವಚನ ಚಳುವಳಿಗಳು ಎಂಬ ಶೀರ್ಷಿಕೆಯಲ್ಲಿ ಎರಡು ಪದಗಳಿವೆ. ಒಂದನೆಯದು ವಚನ, ಎರಡನೆಯ ಚಳುವಳಿಗಳು.

ವಾಸ್ತವವಾಗಿ 'ವಚನ' ಎಂಬ ಪದವನ್ನು ಚಂಪೂ ಕಾವ್ಯಗಳಲ್ಲಿ ಬರುವ ಗದ್ಯಭಾಗಕ್ಕೆಂದು ಸೂಚಿಸಲಾಗುತ್ತಿತ್ತು. ಅದು ಪದ್ಯಕ್ಕಿಂತ ಭಿನ್ನವಾದುದು, ಗದ್ಯ ಎನ್ನುವ ಅರ್ಥದಲ್ಲಿ, ಮತ್ತೆ ಅದನ್ನು ಎರಡು ಪದ್ಯಭಾಗಗಳಿಗೆ ಸಂಪರ್ಕ ಕಲ್ಪಿಸುವ ಅಥವಾ ಕೊಂಡಿಯಾಗುವ ಗದ್ಯ ಭಾಗ ಎಂದು ಗುರುತಿಸಲಾಗುತ್ತಿತ್ತು.

ಆದರೆ ಇಲ್ಲಿ ಬಳಸುತ್ತಿರುವ 'ವಚನ' ಶಬ್ದವು ಅದನ್ನು ಕುರಿತದ್ದಲ್ಲ; ಅದಕ್ಕಿಂತ ಭಿನ್ನವಾದದ್ದು. V.S. Apte ಅವರ ಸಂಸ್ಕೃತ-ಇಂಗ್ಲಿಷ್ ನಿಘಂಟಿನಲ್ಲಿ ಇದಕ್ಕೆ ಹನ್ನೊಂದು ಅರ್ಥಗಳನ್ನು ಕೊಡಲಾಗಿದೆ. ಅವು ಹೀಗಿವೆ:

೧. The act of speaking, uttering, saying.
೨. Speach, utterence
೩. Repeating, resitation
೪. A text, rule
೫. An order, a command
೬. Advice, council
೭. Diclaration, Affirmation
೮. Pronunlalinon (galeter)
೯. The signification or meaning of a word
೧೦. Number
೧೧. Dry ginger

ಇವುಗಳಲ್ಲಿ ಕನ್ನಡದಲ್ಲಿರುವ 'ವಚನ' ಸಾಹಿತ್ಯಕ್ಕೆ ಸಂಬಂಧಿಸಿದಂತೆ ಐದು, ಆರು ಮತ್ತು ಏಳನೆ ಅರ್ಥಗಳ ಕಡೆಗೆ ಗಮನಹರಿಸಬೇಕಾಗುತ್ತದೆ. ಆದ್ದರಿಂದಲೆ 'ವಚನ' ಶಬ್ದಕ್ಕೆ ಇಲ್ಲಿ ಗದ್ಯ ಸಾಹಿತ್ಯ ಪ್ರಕಾರವೆಂದು ಅರ್ಥವಲ್ಲ; ಪ್ರತಿಜ್ಞೆ; ಆತ್ಮಸಾಕ್ಷಿಯ ಮಾತು ಎಂದು ಅರ್ಥ ಎನ್ನುತ್ತಾರೆ, ಡಾ. ಎಂ.ಎಂ. ಕಲಬುರ್ಗಿಯವರು. ಆಪ್ಟೆಯವರು ಹೇಳಿದ ಐದನೆಯ ಅರ್ಥಕ್ಕೆ ಹತ್ತಿರವಾದ ಅಭಿಪ್ರಾಯವಿದು.

"ವಚನ"ವನ್ನು ಅನೇಕ ವಿದ್ವಾಂಸರು ವಿಶ್ಲೇಷಿಸಿದ್ದಾರೆ. ಇದರ ವಿಶಿಷ್ಟತೆ ಕುರಿತು ಪ್ರೊ. ಎ.ಆರ್. ಕೃಷ್ಣಶಾಸ್ತ್ರಿಗಳು ಹೇಳಿರುವುದು ಹೀಗಿದೆ: ಹನ್ನೆರಡನೆಯ ಶತಮಾನದಿಂದೀಚೆಗೆ ವೀರಶೈವರಲ್ಲಿ 'ವಚನಗಳು' ಎಂಬುದೊಂದು ಸಾಹಿತ್ಯ ವಿಶೇಷವು ಪ್ರಚಾರಕ್ಕೆ ಬಂತು. (ಪು. ೧೮೪. ಕನ್ನಡ ಕೈಪಿಡಿ, ತೃತೀಯ ಮುದ್ರಣ.)

ಖಚಿತವಾಗಿ ವಚನಗಳನ್ನು 'ಸಾಹಿತ್ಯ ವಿಶೇಷ' ಎಂದಿರುವ ಈ ಅಭಿಪ್ರಾಯವನ್ನು ಇನ್ನಷ್ಟು ವಿಶದಪಡಿಸುವ ಯತ್ನ ವಿದ್ವಾಂಸರಲ್ಲಿ ನಡೆದಿದೆ.

ವಾಸ್ತವವಾಗಿ ಪ್ರಥಮ ವಚನಕಾರನೆಂದು ಸದ್ಯಕ್ಕೆ ತೀರ್ಮಾನವಾಗಿರುವ ಜೇಡರ ದಾಸಿಮಯ್ಯ 'ವಚನ' ಎಂಬ ಪದವನ್ನೆ ಬಳಸುವುದಿಲ್ಲ. ಅವನಲ್ಲಿ ಮೃಡಭಕ್ತರ ನುಡಿಗಡಣ, ಶರಣರ ಸೂಳ್ನುಡಿಗಳೆಂಬ ಪದಗಳು ಬಳಕೆಯಾಗಿವೆ. ಒಂದರ್ಥದಲ್ಲಿ ಶಿವಶರಣರಲ್ಲಿ ನಡೆದ ಅನುಭಾವಿಕ ಸಂವಾದಗಳು ಅವು ಎಂಬ ಧ್ವನಿ ಅಲ್ಲಿರುವುದು- ವಚನಗಳ ಮಹತ್ವವನ್ನು ಸೂಚಿಸುವಂತಿದೆ.

ಇನ್ನು ಚಳುವಳಿಗಳು ಎಂದು ಪದಗಳ ವಿಷಯಕ್ಕೆ ಬಂದರೆ ಚಟುವಟಿಕೆಯಿಂದ ನಡೆಸುವ ಸಾಮಾಜಿಕ ವಿಡಾಯ ಅಥವಾ ಕ್ಷೋಭೆ ಎನ್ನಬಹುದು. ಈ ಕ್ಷೋಭೆಯನ್ನು ಗೊಂದಲ ಎನ್ನುವುದಕ್ಕಿಂತ ಅನ್ಯಾಯಗಳ ವಿರುದ್ಧ ನಡೆಸುವ ಹೋರಾಟ ಎನ್ನಬಹುದು.

೨

ಹೀಗೆ ನೋಡಿದಡೆ ವಚನ ಚಳುವಳಿಯು ಬಹುಶಃ ಎರಡು ಪ್ರಧಾನ ಘಟ್ಟಗಳಲ್ಲಿ ನಡೆಯಿತೆನ್ನಬಹುದು. ಒಂದನೆಯದು, ಹನ್ನೆರಡನೆಯ ಶತಮಾನದಲ್ಲಿ ಶರಣರು ನಡೆಸಿದ ಸಾಮಾಜಿಕವೂ ಧಾರ್ಮಿಕವೂ ಹಾಗೂ ಸಾಹಿತ್ಯಿಕವೂ ಆದ ಆಂದೋಲನ. ಎರಡನೆಯದು ಹದಿನಾರನೆಯ ಶತಮಾನದಲ್ಲಿ ಯಡೆಯೂರ ಸಿದ್ಧಲಿಂಗೇಶ್ವರರಿಂದ ನಡೆದ ವಚನಗಳ ಸೃಜನಾತ್ಮಕತೆಯನ್ನು ಮತ್ತೆ ಜಾಗೃತಗೊಳಿಸಿದ ಆಂದೋಲನ. ಇನ್ನು ಇಪ್ಪತ್ತನೆಯ ಶತಮಾನದಲ್ಲಿ ಮತ್ತೆ ವಚನಗಳ ರಚನೆಯಾದದ್ದನ್ನು ಅಂಥ ರಚನೆಗಳು ಸಾಕಷ್ಟು ದೊಡ್ಡ ಪ್ರಮಾಣದಲ್ಲಿ ನಡೆದದ್ದನ್ನು ಮೂರನೆಯ ಚಳುವಳಿ ಎನ್ನಬಹುದೇನೋ.

* ಮಾಜಿ ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು





ಒಂದರ್ಥದಲ್ಲಿ ವಚನ ಚಳುವಳಿಗಳು ಪ್ರಧಾನವಾಗಿ ಎರಡೇ ಎಂದರೂ ಈ ಚಳುವಳಿಯ ಸತ್ವವನ್ನು ಗಮನಿಸಿದರೆ ಹನ್ನೆರಡನೆ ಶತಮಾನದಲ್ಲಿ ನಡೆದ ಚಳುವಳಿಯೇ ಹೆಚ್ಚು ಪರಿಪೂರ್ಣವೆನ್ನಿಸುವಂಥ ಒಂದು ಚಳುವಳಿಯಾಗಿದ್ದಿತೆನ್ನಬಹುದು.

೩

ಕರ್ನಾಟಕ ಸಾಂಸ್ಕೃತಿಕ ಇತಿಹಾಸದಲ್ಲಿ ಹನ್ನೆರಡನೆ ಶತಮಾನವು ಒಂದು ಸಂಕ್ರಮಣ ಸ್ಥಿತಿ ಕಾಲ ಎನ್ನಬಹುದು.

ರಾಜಕೀಯವಾದ ಅಸ್ಥಿರತೆ ಒಂದು ಕಡೆ, ಧಾರ್ಮಿಕವಾದ ಆಷಾಢಭೂತಿತನ ಇನ್ನೊಂದು ಕಡೆ, ಮಗುದೊಂದು ಕಡೆಗೆ ಮೂಢನಂಬಿಕೆಗಳಿಂದ ವಿಧವಿಧವಾದ ಶೋಷಣೆಗಳಿಗೆ ಆಗರವಾಗಿದ್ದ ಸಮಾಜ. ವರ್ಣಾಶ್ರಮಧರ್ಮದ ಶ್ರೇಣೀಕರಣಗೊಂಡ ಸಮಾಜದಲ್ಲಿ ಜಾತೀಯತೆ ಹಾಗೂ ಅಸ್ಪೃಶ್ಯತೆಗಳು ಮಾನವನನ್ನು ಶೋಷಿಸುವ ಸಾಧನಗಳಾಗಿದ್ದ ಕಾಲವದು. ಜ್ಞಾನವೆನ್ನುವುದು ಕೆಲವರಿಗೆ ಮಾತ್ರವೇ ಮೀಸಲು, ಇನ್ನು ಕೆಳಸ್ತರದವರೇನಿದ್ದರೂ ಮೇಲುವರ್ಗದವರ ಸೇವೆಯಲ್ಲಿಯೇ ಬದುಕ ಸಾರ್ಥಕತೆ ಪಡೆದುಕೊಳ್ಳಬೇಕೆಂಬ ಭಾವನೆಯೇ ಬಲಗೊಳ್ಳುತ್ತಿದ್ದ ಕಾಲ. ಧಾರ್ಮಿಕವಾಗಿಯೂ ಆಚರಣೆಗಳೇ ಪ್ರಧಾನವಾಗಿ ಧರ್ಮದ ಮೂಲ ಅಂಶಗಳೇ ಮರೆಯಾಗಿ ಹೋಗಿಬಿಡುವಂಥ ಪರಿಸ್ಥಿತಿ.

ಇಂಥ ಸಂಕ್ರಮಣ ಕಾಲದಲ್ಲಿ ವಚನ ಚಳುವಳಿ ಮೊಳಕೆಯೊಡೆದುದು- ಅಷ್ಟೇ ಅಲ್ಲ ಬೆಳೆದು ದಾಂಗುಡಿಯಿಟ್ಟು ಫಲ ನೀಡುವಂತೆ ಆದದ್ದು ಕರ್ನಾಟಕದ ಭಾಗ್ಯ ಎನ್ನಬೇಕು. ವಾಸ್ತವವಾಗಿ ನೋಡಿದ ನಮ್ಮ ಎರಡು ಪ್ರಧಾನ ಮಹಾಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತಗಳು ಎರಡು ರೀತಿಯ ಮೌಲ್ಯಗಳಿಗೆ ದ್ಯೋತಕವಾಗಿದ್ದವು. ರಾಮಾಯಣ ಮೌಲ್ಯಗಳ ಪ್ರಶಂಸೆ ಮಾಡುವ ಕಾರ್ಯ ಮಾಡಿದ್ದರೆ ಮಹಾಭಾರತ ಮೌಲ್ಯಗಳ ಹುಡುಕಾಟದಲ್ಲಿ ತೊಡಗಿಕೊಂಡ ಮಹಾಕಾವ್ಯವಾಗಿ ನಮಗೆ ಕಾಣಿಸುವುದು ವಿಸ್ಮಯಕರ ಅಲ್ಲ.

ಆದರೆ ವಚನ ಚಳುವಳಿ ಒಂದೇ ಕಾಲಕ್ಕೆ ಅಪಮೌಲ್ಯಗಳನ್ನು- ಜಾತೀಯತೆ, ಅಸ್ಪೃಶ್ಯತೆ, ಮೂಢನಂಬಿಕೆ, ಆಷಾಢಭೂತಿತನಗಳನ್ನು ವಿಡಂಬಿಸಿತು; ಇನ್ನೊಂದು ಕಡೆಗೆ ಮೌಲ್ಯಗಳನ್ನು ಹುಡುಕಾಡಿತು- ಮತ್ತೆ ಮೌಲ್ಯಗಳನ್ನು ರೂಪಿಸಿತು. ಒಂದರ್ಥದಲ್ಲಿ ಕೆಟ್ಟುದನ್ನು ಕೆಡವುವ, ರಿಪೇರಿ ಮಾಡಬಹುದಾದದ್ದನ್ನು ರಿಪೇರಿ ಮಾಡುವ ಹಾಗೆಯೇ ಹೊಸಹೊಸದಾಗಿ ಮೌಲ್ಯಗಳನ್ನು ರೂಪಿಸುವ ಮಹಾನ್ ಯತ್ನದಲ್ಲಿ ತನ್ನನ್ನು ತೊಡಗಿಸಿಕೊಂಡಿತು. ಅಂದರೆ ಹನ್ನೆರಡನೆ ಶತಮಾನದ ವಚನ ಚಳುವಳಿಯು ಸಾಮಾಜಿಕವೂ, ಧಾರ್ಮಿಕವೂ ಹಾಗೂ ಸಾಹಿತ್ಯಿಕವೂ ಆದ ಮೌಲ್ಯಗಳನ್ನು ರೂಪಿಸುವಲ್ಲಿ ಅತ್ಯಂತ ಮಹತ್ವದ ಪಾತ್ರವನ್ನು ವಹಿಸಿತು.

ಅ) ಸಾಮಾಜಿಕವಾಗಿ ಪ್ರಪ್ರಥಮವಾಗಿ ವಚನ ಸಾಹಿತ್ಯ ಈ ನೆಲದ ಬದುಕನ್ನು ಅತ್ಯಂತ ಮಹತ್ವವಾದುದು ಹಾಗೂ ಅರ್ಥಪೂರ್ಣವಾದುದು ಎಂದೂ ಗ್ರಹಿಸಿತು. 'ಮರ್ತ್ಯವೆಂಬುದು ಕರ್ತಾರ ಕಮ್ಮಟ' ಎಂಬ ಘೋಷಣೆಯ ಹಿಂದೆ- ಇಲ್ಲಿನ ಬದುಕಿನಲ್ಲಿ ಗೆಲ್ಲಲಾರದವರು ಇನ್ನೆಲ್ಲಿಯೂ ಗೆಲ್ಲಲಾರರು ಎಂಬ ಅವಧಾರಣೆಯಿದ್ದು ಈ ನೆಲದ ಬದುಕು-ಈ ದೇಹದ ಅಸ್ತಿತ್ವ, ಈ ದೇಹದ ಪಂಚೇಂದ್ರಿಯಗಳ ಅಸ್ತಿತ್ವ; ಹೊನ್ನು ಹೆಣ್ಣು ಮತ್ತು ಮಣ್ಣುಗಳು ಹೇಗೆ ಅರ್ಥಪೂರ್ಣ ಆಗಬಲ್ಲುವು ಎಂಬ ಚಿಂತನೆ ಪ್ರಾಧಾನ್ಯವನ್ನು ಪಡೆದುದು 'ವಚನ ಚಳುವಳಿಯು ಪ್ರಥಮ ಸಾಧನೆ' ಎನ್ನಬೇಕು. ಗಜೇಶ ಮಸಣಯ್ಯಗಳ ಪುಣ್ಯಸ್ತ್ರೀಯ ಈ ವಚನ ಗಮನಿಸಿ:

**ಹೊನ್ನ ಬಿಟ್ಟು ಲಿಂಗವನೊಲಿಸಬೇಕೆಂಬರು**
**ಹೊನ್ನಿಂಗೆಯೂ ಲಿಂಗಕ್ಕೆಯೂ ವಿರುದ್ಧವೆ?**
**ಹೆಣ್ಣ ಬಿಟ್ಟು ಲಿಂಗವನೊಲಿಸಬೇಕೆಂಬರು**
**ಹೆಣ್ಣಿಂಗೆಯೂ ಲಿಂಗಕ್ಕೆಯೂ ವಿರುದ್ಧವೆ?**
**ಮಣ್ಣ ಬಿಟ್ಟು ಲಿಂಗವನೊಲಿಸಬೇಕೆಂಬರು,**
**ಮಣ್ಣಿಂಗೆಯೂ ಲಿಂಗಕ್ಕೆಯೂ ವಿರುದ್ಧವೆ?**
**ಅಂಗವ ಬಿಟ್ಟು ಲಿಂಗವನೊಲಿಸಬೇಕೆಂಬರು**
**ಅಂಗಕ್ಕೆಯೂ ಲಿಂಗಕ್ಕೆಯೂ ವಿರುದ್ಧವೆ?**
**ಇಂದ್ರಿಯಂಗಳ ಬಿಟ್ಟು ಲಿಂಗವನೊಲಿಸಬೇಕೆಂಬರು**
**ಇಂದ್ರಿಯಂಗಳಿಗೆಯೂ ಲಿಂಗಕ್ಕೆಯೂ ವಿರುದ್ಧವೆ?**
**ಜಗವ ಬಿಟ್ಟು ಲಿಂಗವನೊಲಿಸಬೇಕೆಂಬರು**
**ಜಗಕ್ಕೆಯೂ ಲಿಂಗಕ್ಕೆಯೂ ವಿರುದ್ಧವೆ?**
**ಇದು ಕಾರಣ ಪರಂಜ್ಯೋತಿ ಪರಮ ಕರುಣಿ ಪರಮ ಶಾಂತನೆಂಬ ಲಿಂಗವು**
**ಕೋಪದ ಮುನಿಸನರಿದಡೆ ಕಾಣಬಹುದು ಮರೆದರೆ ಕಾಣಬಾರದು**
**ಅರಿವಿಂದ ಕಂಡೊರಗಿದ ಸುಖವು ಮಸಣಪ್ರಿಯ ಗಜೇಶ್ವರಾ.**

ಹೆಣ್ಣು, ಹೊನ್ನು, ಮಣ್ಣು, ಅಂಗ, ಇಂದ್ರಿಯಗಳು ಮತ್ತು ಜಗತ್ತಿನ ಅರ್ಥಪೂರ್ಣತೆಯ ಕಡೆಗೆ ಅರಿತು ಬದುಕಬೇಕಾದ ಎಚ್ಚರವನ್ನು ಈ ವಚನ ಚಳುವಳಿ ಒಳಗೊಂಡಿದ್ದಿತು.

ಆ) ಈ ವಚನ ಚಳುವಳಿಯ ಸಾಧನೆಯ ಹಿಂದೆ ಇದ್ದುದು ಮುಕ್ತವಾದ ಚಿಂತನೆ. ಆದ್ದರಿಂದಲೆ ಬಸವಣ್ಣ ತನ್ನ ವಚನದಲ್ಲಿ 'ಹೊಲೆಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ' ಎಂದು

ಘೋಷಿಸುವಾಗ ಪುರುಷಸ್ತ್ರೀ ಇಬ್ಬರೂ ಸಮಾನರು; ಅಷ್ಟೇ ಅಲ್ಲ ವ್ಯಕ್ತಿಗಳಲ್ಲಿ ತರತಮಭಾವ ಇರಬಾರದು ಎಂದು ಘೋಷಿಸುವಾಗ ಅಸ್ಪೃಶ್ಯತೆಗೆ ಅವಕಾಶವಿಲ್ಲದಿರುವುದನ್ನು 'ವ್ಯಾಸಯೋಮಿತಿಯ ಮಗ ಮಂಡೋದರಿ ಕಪ್ಪೆಯ ಮಗಳು...' ಎಂಬ ವಚನದಲ್ಲಿ ಘೋಷಿಸುವಾಗ ಪ್ರಪ್ರಥಮವಾಗಿ ಅಸ್ಪೃಶ್ಯತೆಯ ವಿರುದ್ಧ ಧ್ವನಿ ಎತ್ತಿದ ಚಳುವಳಿ ಇದಾಯಿತು. ಕೇವಲ ದನಿಯೆತ್ತಿದ್ದೇ ಅಲ್ಲ- ಮಾದರ ಚೆನ್ನಯ್ಯ, ಡೋಹರ ಕಕ್ಕಯ್ಯ, ಮಾದಾರ ದೂಡಯ್ಯ, ಮಡಿವಾಳಯ್ಯ, ಅಂಬಿಗರ ಚೌಡಯ್ಯ, ಕ್ಷೌರಿಕ ಅಮ್ಮಿದೇವಯ್ಯ ಇಂಥ ವ್ಯಕ್ತಿತ್ವಗಳಲ್ಲಿದ್ದ ಚೈತನ್ಯ ಹೊರಹೊಮ್ಮಲು ಕಾರಣವಾದವುಗಳೇ ಅಲ್ಲ ಇಪ್ಪತ್ತೊಂದನೆಯ ಶತಮಾನ ಕೂಡ ಬೆರಗುಪಡುವಂತೆ ಉರಿಲಿಂಗಪೆದ್ದಿಗಳಂಥ ಒಬ್ಬ ಅಸ್ಪೃಶ್ಯ ನಾಗಿದ್ದವನು ಮಹಾಸತ್ವಶಾಲಿಯಾದ ಮಹಾನ್ ವಿದ್ವಾಂಸನೂ ಶರಣೋತ್ತಮನೂ ಕೊನೆಗೆ ಮಠಾಧಿಪತಿಯೂ ಆಗುವ ಸಾಧನೆ ಮಾಡಿದುದು ಹನ್ನೆರಡನೆಯ ಶತಮಾನದ ಚಳುವಳಿಯ ಒಂದು ಸಾಧನೆ.

ಇ) ಈ ಚಳುವಳಿಯ ಹಿಂದಿದ್ದುದು ಜ್ಞಾನಸ್ಫೋಟದ ಕ್ರಾಂತಿ. ಜ್ಞಾನ ಎನ್ನುವುದು ಎಲ್ಲರ ಹಕ್ಕು ಎನ್ನುವ ಈ ಮನೋವೃತ್ತಿ ವೇದಮೂರ್ತಿ ಸಂಗಣ್ಣನ ಮುಖದಲ್ಲಿ ಘೋಷಣೆಗೊಂಡದ್ದು ಹನ್ನೆರಡನೆ ಶತಮಾನ ಚಳುವಳಿಯ ಮತ್ತೊಂದು ಮಹತ್ವದ ಅಂಶ- 'ವೇಳೆಯರಿದು ಕೂಗುವ ತಾಮ್ರಚೂಡಂಗೆ ಅದಾವ ಜ್ಞಾನ; ಸಿಹಿಯನರಿದೆಯಿದುವ ಪಿಪೀಲಿಕಂಗೆ ಅದಾವ ಜ್ಞಾನ; ತಾನುಂಡು ನೆನೆದಡೆ ಶಿಶುತೃಪ್ತಿಯಹ ಕೂರ್ಮಂಗೆ ಅದಾವ ಜ್ಞಾನ? ಇಂತೀ ಜೀವಜಾಲಂಗಳೆಲ್ಲವೂ ಜ್ಞಾನಕ್ಕೊಳಗೆ...' ಎಂಬ ಘೋಷಣೆ ವಚನ ಚಳುವಳಿಯು ಜ್ಞಾನದ ಬಾಗಿಲುಗಳನ್ನು ಮುಕ್ತವಾಗಿ ತೆರೆದ ಕ್ರಾಂತಿಕಾರತೆಗೆ ಕಾರಣವಾಯಿತು. ಇಲ್ಲಿ ಏಕಲವ್ಯನಂಥ ಜ್ಞಾನಪಿಪಾಸುವಿಗೆ ನೆರವಾಗಲಾರೆನೆಂಬ ದ್ರೋಣರಿಗೆ ಅವಕಾಶ ಇರಲಿಲ್ಲ; ಅಷ್ಟೇ ಅಲ್ಲ ಬ್ರಾಹ್ಮಣರಲ್ಲದವರಿಗೆ ಶಸ್ತ್ರವಿದ್ಯೆಯನ್ನು ಕಲಿಸಲಾರೆನೆಂದು ಪ್ರತಿಜ್ಞೆ ಮಾಡಿದ್ದ ಪರಶುರಾಮರಿಗೂ ಅವಕಾಶ ಇರಲಿಲ್ಲ. ಆದ್ದರಿಂದಲೇ ವಚನ ಚಳುವಳಿಯಲ್ಲಿ ಸಮಾಜದ ಎಲ್ಲ ಸ್ತರದ ಜನತೆ ಅಸ್ಪೃಶ್ಯವೆಂದು ಶತಶತಮಾನಗಳಿಂದ ತುಳಿತಕ್ಕೆ ಒಳಗಾಗಿದ್ದ ಜನತೆ ಕೂಡ ಜ್ಞಾನವನ್ನು ಪಡೆಯುವ ಹಕ್ಕುದಾರವಾಯಿತು.

ಡೋಹರ ಕಕ್ಕಯ್ಯ, ಮಾದರ ಚೆನ್ನಯ್ಯ, ಮಾದರ ದೂಡಯ್ಯ, ಕಾಳವ್ವೆ ಮೊದಲಾದ ಅಸ್ಪೃಶ್ಯರೆನ್ನಿಸಿ ಕೊಂಡಿದ್ದವರು, ನಗೆಯ ಮಾರಿತಂದೆ, ಬಹುರೂಪಿ ಚೌಡಯ್ಯ, ಕಲಕೇತಯ್ಯ ಮೊದಲಾದ ಜನಪದ ಕಲಾವಿದರು, ತೆಲುಗೇಶ ಮಸಣಯ್ಯ, ತುರುಗಾಹಿ ರಾಮಣ್ಣ ವೀರಗೊಲ್ಲಾಳರಂಥ ಗೊಲ್ಲರು, ಗಾಣದ ಕಣ್ಣಪ್ಪ, ಮಾರಿತಂದೆ, ಚೌಡಯ್ಯನಂಥ ಅಂಬಿಗರು, ಶಂಕರ ದಾಸಿಮಯ್ಯನಂಥ ಸಿಂಪಿಗರು, ಜೇಡರ ದಾಸಿಮಯ್ಯನಂಥ ನೇಯ್ಗೆಯವರು, ಮುದ್ದಣನಂಥ ರೈತ, ಭೀಮಣ್ಣನಂಥ ಅಡುಗೆಯ ಭಟ್ಟ, ಕಲ್ಲಯ್ಯ ಬೊಮ್ಮಣ್ಣರಂಥ ಅಕ್ಕಸಾಲಿಗರು, ಮಾರಯ್ಯನಂಥ ಹೆಂಡ ಮಾರುವವರು, ಅಮ್ಮಿದೇವಯ್ಯನಂಥ ಕ್ಷೌರಿಕರು, ಸಂಕವ್ವೆಯಂಥ ಸೂಳೆ, ಸತ್ಯಕ್ಕನಂಥ ಕಸ ಗುಡಿಸುವಾಕೆ ಮೊದಲಾದವರು ಸುಶಿಕ್ಷಿತರಾದದ್ದೇ ಅಲ್ಲ ಸೃಜನಾತ್ಮಕವಾಗಿ ವಚನಗಳನ್ನು ರಚಿಸಿದುದು ಈ ವಚನ ಚಳುವಳಿಯ ಸಾಧನೆ ಎನ್ನಬೇಕು.

ಮೊದಲ ಬಾರಿಗೆ ಮಹಿಳೆಯರು ಮತ್ತು ಪುರುಷರು ಎಂಬ ಭೇದಭಾವನೆ ತೊಲಗಿ ಮಹಿಳೆಯರಿಗೆ ಧಾರ್ಮಿಕ ಸ್ವಾತಂತ್ರ್ಯವೂ ಪ್ರಾಪ್ತವಾದುದು ಈ ಚಳುವಳಿಯ ಸಾಧನೆ ಎನ್ನಬೇಕು. ವಚನ ಚಳುವಳಿ ಜನರ ಬದುಕನ್ನು ನೆಮ್ಮದಿ ಪಡೆಯುವಂತೆ ಮಾಡುವ ಮಹಾ ಸಂಕಲ್ಪದಿಂದ ಕೂಡಿರುವುದು- ಆದ್ದರಿಂದಲೆ ಅವರು 'ಆಚಾರವೆ ಸ್ವರ್ಗ, ಅನಾಚಾರವೆ ನರಕ, ಸತ್ಯವ ನುಡಿವುದೆ ದೇವಲೋಕ, ಮಿಥ್ಯವ ನುಡಿವುದೆ ಮರ್ತ್ಯಲೋಕ' ಎಂಬ ವಾಸ್ತವದ ಬದುಕಿನ ದರ್ಶನದತ್ತ ಕಣ್ಣು ಹೊರಳಿಸಿದರೂ ಈ ವಚನ ಚಳುವಳಿ-ಸ್ತ್ರೀ ಸ್ವಾತಂತ್ರ್ಯದ ಘೋಷಣೆ ಮಾಡಿದಂತೆಯೇ, ಅಸ್ಪೃಶ್ಯತೆಯನ್ನು ತೊಡೆದು ಹಾಕಿತಲ್ಲದೆ ಜಾತೀಯತೆಯನ್ನು ನಿರ್ನಾಮ ಮಾಡುವ ಸಂಕಲ್ಪದಿಂದ ಕೂಡಿದ್ದಿತು.

ಈ) ಈ ಚಳುವಳಿಯ ಮತ್ತೊಂದು ಮಹತ್ವದ ಅಂಶ ಎಲ್ಲ ಜ್ಞಾನವನ್ನು ಜನರಾಡುವ ಮಾತಿನಲ್ಲಿ ತಿಳಿಸಿಕೊಡುವ ಮಹತ್ವದ ಸಾಧನೆ ಮಾಡಿದ್ದು. ಇದನ್ನೆ ಬಸವನಾಳರು -ದೇವವಾಣಿ, ಜನವಾಣಿಯಾಗಲು ನಿರಾಕರಿಸಿದಾಗ ಜನವಾಣಿಯನ್ನೆ ದೇವವಾಣಿಯನ್ನಾಗಿ ಮಾಡಿದವರು ವಚನಕಾರರು ಎಂದು ಸ್ತುತಿಸಿದ್ದು-

ಇದರಿಂದ ಆದ ಸಾಧನೆಯೆಂದರೆ ಸರಸ್ವತಿ ಅರಮನೆ ಗುರು ಮನೆಗಳನ್ನು ಬಿಟ್ಟು ಗುಡಿಸಲುಗಳಿಗೆ ಏಕೆ ಬೀದಿಗೂ ಬಂದು ನಿಲ್ಲುವ ಸಾಧನೆಯಾಯಿತು. ವಚನ ಎಂಬುದು ವಿಶ್ವದಲ್ಲಿಯೇ ವಿಶಿಷ್ಟ ಎನ್ನುವಂಥ ಸಾಹಿತ್ಯವಾಯಿತು. ವಿಶ್ವಕ್ಕೆ ಕನ್ನಡದ ಕೊಡುಗೆಯೂ ಆಯಿತು.

ಉ) ರಾಮಾಯಣ ಮಹಾಭಾರತಗಳು ಕಥನರೂಪದ ಕೃತಿಗಳಾಗಿದ್ದರೆ 'ವಚನ' ಮುಕ್ತಕ ರೀತಿಯದಾಗಿದ್ದು ಕಥನ ಪರಂಪರೆಯನ್ನು ಮುರಿಯಿತು. ಕನ್ನಡಕ್ಕೆ ಹೊಸ ಪರಂಪರೆಯನ್ನೆ ಹಾಕಿಕೊಟ್ಟಿತು. ವಚನ ಸಾಹಿತ್ಯವನ್ನು ಹೋಲುವ ಸಾಹಿತ್ಯ ಬೈಬಲ್, ಕುರಾನ್, ಥಾಮಸ್ ಕೆಂಪಿಸ್‌ನ ಕೃತಿ ಹಾಗೂ ಇತರ ಕೆಲವೆಡೆಗಳಲ್ಲಿ ಇದೆಯೆಂದರೂ ಅವುಗಳು ವಚನಗಳನ್ನು ಕೆಲವಂಶಗಳಲ್ಲಿ ಮಾತ್ರ ಹೋಲುವ ರಚನೆಗಳು ಮಾತ್ರ. ವಾಸ್ತವವಾಗಿ 'ವಚನ' ತನ್ನದೇ ಆದ ವಿಶಿಷ್ಟ ಗುಣಸಂಪನ್ನವಾದದ್ದು ಇನ್ನು ಹನ್ನೆರಡನೆ ಶತಮಾನದ ವಚನ ಚಳುವಳಿಯ ಮಹತ್ವದ





ಮತ್ತೊಂದು ಅಂಶವೆಂದರೆ ಹನ್ನೆರಡನೆಯ ಶತಮಾನದ ಕನ್ನಡ ಒಂದೇ ಜಿಗಿತಕ್ಕೆ ಪವಾಡವೆನ್ನುವಂತೆ ಇಪ್ಪತ್ತನೆ ಶತಮಾನದ ಕನ್ನಡದ ಅಭಿವ್ಯಕ್ತಿ ಶಕ್ತಿಗಳಿಗೆ ಸಮೀಪವೆನ್ನುವಂಥ ಸಾಧನೆ ಪಡೆದದ್ದು. ಜನರು ಆಡುವ ಮಾತಿನ ಮಹತ್ವವನ್ನು ವಿಶ್ವಕ್ಕೆ ಪರಿಚಯ ಮಾಡಿಕೊಟ್ಟದ್ದು ಈ ವಚನ ಚಳುವಳಿ.

ಈ ಚಳುವಳಿಗಳ ಹಿಂದೆ ಮೌಲ್ಯಗಳ ಹುಡುಕಾಟವಿದ್ದಿತೆಂದು ಹೇಳಲಾಗಿದೆ ಅಲ್ಲವೆ? ಕಾಯಕ, ದಾಸೋಹ, ಅರಿವು, ಕುರುಹು, ಬಯಲು ಇಂಥ ಪರಿಕಲ್ಪನೆಗಳು ಒಳಗೊಂಡಿರುವ ಸಾಮಾಜಿಕ ಮೌಲ್ಯಗಳನ್ನು ಇನ್ನೂ ವಿಶ್ಲೇಷಿಸಿ ಅರ್ಥೈಸಿಕೊಳ್ಳಬೇಕಾಗಿದೆ. ಇಷ್ಟೆಲ್ಲ ಹನ್ನೆರಡನೆ ಶತಮಾನದ ವಚನ ಚಳುವಳಿಯ ವಿಶಿಷ್ಟತೆ ಎನ್ನುತ್ತಿದ್ದಂತೆ ನಾವು ಮರೆಯಲಾರದ ಮಹತ್ವದ ಅಂಶ ಒಂದು ಇಲ್ಲಿ ಗಮನಾರ್ಹವಾದುದಾಗಿದೆ. ಈ ವಚನ ಚಳುವಳಿಯ ಸಿದ್ಧಿ ಎನ್ನುವುದು ಒಬ್ಬ ವ್ಯಕ್ತಿಯ ಸಿದ್ಧಿ-ಸಾಧನೆ ಆಗಿ ಉಳಿದಿಲ್ಲ. ಒಂದರ್ಥದಲ್ಲಿ ಇದು ಒಂದು ಸಾಮೂಹಿಕ ಸಿದ್ಧಿ. ಇಲ್ಲಿ ಮುಕ್ತಾಯಿ ಇದ್ದಾಳೆ, ಮೌನ ಮತ್ತು ಮಾತುಗಳ ಬಗೆಗೆ ಮಥನ ಮಾಡಿದವಳು; ಬಯಲ ದೇಹಿಗನಾದ ಅಲ್ಲಮನನ್ನೆ ಹುಬ್ಬೇರಿಸುವಂತೆ ಮಾಡಿದ ಅಕ್ಕಮಹಾದೇವಿಯಿದ್ದಾಳೆ. ಯುಗದ ಉತ್ಸಾಹವಾಗಿದ್ದ ಬಸವಣ್ಣ ಇದ್ದಾನೆ. ನಿಂದರೆ ನೆಳಲಿಲ್ಲ, ನಡೆದರೆ ಹೆಜ್ಜೆಯ ಗುರುತಿಲ್ಲ ಎಂಬಂಥ ಅಲ್ಲಮ ಇದ್ದಾನೆ. ಅಟ್ಟೆಯ ಚುಚ್ಚುವ ಉಳಿಯ ಮೊನೆಯಲ್ಲಿ ಪರಮೇಶ್ವರನೆ ಪ್ರತ್ಯಕ್ಷವಾದರೂ ತನ್ನ ಕಾಯಕದಲ್ಲಿಯೆ ಆನಂದಪಡುವ ಧೂಳಯ್ಯ ಇದ್ದಾನೆ.

ಒಂದರ್ಥದಲ್ಲಿ ಇದು ನೂತನ ಸಮಾಜ ನಿರ್ಮಾಣ ಸಂಕಲ್ಪಬದ್ಧವಾದ ಸಮಾನ ಮನಸ್ಕರ ಒಂದು ಧ್ಯೇಯಾರ್ಪಿತ ವಾದ ಸಮುದಾಯ -ಇದಕ್ಕೆ ಬಸವಣ್ಣನ ನೇತೃತ್ವ ಲಭಿಸಿದ್ದುದು ಕರ್ನಾಟಕದ ಪುಣ್ಯ.

ವಚನ ಚಳುವಳಿಯ ಮೊದಲ ಹಂತ ಹನ್ನೆರಡನೆ ಶತಮಾನದಲ್ಲಿ ಸಾಂಸ್ಕೃತಿಕ ಉತ್ಕರ್ಷ ಪಡೆದದ್ದು ಎಷ್ಟು ಮಹತ್ವದ್ದೋ ಅಷ್ಟೇ ದುರಂತಮಯವಾದದ್ದು. ಇಂಥ ಒಂದು ಚಳುವಳಿ ಬಸವಣ್ಣ ಕಲ್ಯಾಣ ಬಿಡುವಂತಾದಾಗ ನಿಂತು ಹೋದದ್ದು ವಚನಗಳು ಚೆಲ್ಲಾಪಿಲ್ಲಿಯಾದವು; ಶರಣರು ಕಂಗೆಟ್ಟರು. ವಚನ ರಚನೆ ತಟಕ್ಕನೆ ನಿಂತಂತಾಗಿ ಬಿಟ್ಟಿತು.

ಸುದೈವ ಹದಿನೈದನೆ ಶತಮಾನದ ಕೊನೆಗೆ ಈ ವಚನ ಸಾಹಿತ್ಯವನ್ನು ಸಂಕಲಿಸಿ ಪುನರುಜ್ಜೀವನಗೊಳಿಸುವ ಯತ್ನ ನಡೆಯಿತು. ಈ ಮಧ್ಯೆ ಅಜ್ಞಾತ ವಚನಕಾರರಿಂದ ಅಲ್ಲೊಂದು ಇಲ್ಲೊಂದು ವಚನ ರಚನೆ ಆಗಿದ್ದುದರ ಸಂಗತಿಗಳು ಇದ್ದರೂ ಮತ್ತೆ ವಚನ ಚಳುವಳಿ ಎರಡನೆ ಸಲ ಸೃಜನಾತ್ಮಕವಾಗಿ ಆರಂಭಗೊಂಡದ್ದು ಯಡೆಯೂರ ಸಿದ್ಧಲಿಂಗೇಶ್ವರರಿಂದ. ಸುಮಾರು ಮೂರು ಶತಮಾನಗಳ ಕಾಲ ಕರ್ನಾಟಕದ ಸಾಂಸ್ಕೃತಿಕ ವಲಯವನ್ನು ಪ್ರಭಾವಿಸಿದ ಸಿದ್ಧಲಿಂಗರು ವಚನಗಳ ಪುನರುಜ್ಜೀವನಕ್ಕೆ ಕಾರಣನಾದ ಮೇರುಪುರುಷ. ಅವನಾದ ಮೇಲೆ ಅವನ ಶಿಷ್ಯರು ಹಾಗೂ ಮಠಾಧೀಶರು ವಚನ ರಚನೆ ಮಾಡಿದ್ದುಂಟು. ಆದರೆ ಹನ್ನೆರಡನೆ ಶತಮಾನದ ಸಾಮಾಜಿಕ ಕಾಳಜಿಗಳು ಅದೇ ಮಟ್ಟದಲ್ಲಿ ಇಲ್ಲಿನ ವಚನಗಳಲ್ಲಿ ಇಲ್ಲ- ಅಷ್ಟೇ ಅಲ್ಲ- ಹನ್ನೆರಡನೆ ಶತಮಾನದ ವಚನ ಚಳುವಳಿ- ಒಂದು ಸಾಮೂಹಿಕ ಸಿದ್ಧಿಯೂ ಆಗಿದ್ದಿತು.

ಎರಡನೆಯ ಘಟ್ಟದ ವಚನ ಚಳುವಳಿ ವೈಯಕ್ತಿಕ ಸಾಧನೆಗಳಾಗಿ ಮಾತ್ರ ಉಳಿದಿದೆ. ಅಲ್ಲದೆ ಹನ್ನೆರಡನೆ ಶತಮಾನದಲ್ಲಿದ್ದ ಹಾಗೆ ಭಿನ್ನ ಭಿನ್ನ ಸಮಾಜದಿಂದ ಬಂದವರ ಅನುಭವಗಳು ಇಲ್ಲಿಲ್ಲ. ಉದಾಹರಣೆಗೆ ಸಿದ್ಧಲಿಂಗರ ವಚನಗಳನ್ನೇ ನೋಡಿದರೆ ಅದು ಅದರ ಶೀರ್ಷಿಕೆಯೇ ಹೇಳುವಂತೆ 'ಷಟ್ಸ್ಥಲಜ್ಞಾನ ಸಾರಾಮೃತ' ಆಗಿದೆ.

ಉಳಿದ ರಚನೆಕಾರರೂ ಇದ್ದಾರೆ ಕಡಕೋಳ ಮಡಿವಾಳಪ್ಪನವರವರೆಗೆ. ಹೆಚ್ಚೆಂದರೆ ಇಲ್ಲಿ ಒಂದಷ್ಟು ವಿಡಂಬನೆ ಅಲ್ಲಲ್ಲಿದೆ ಎನ್ನಬಹುದು.

ಇನ್ನು ಮೂರನೆಯ ಘಟ್ಟದ ವಚನ ಚಳುವಳಿಯನ್ನು ವಚನ ಚಳುವಳಿ ಎಂದು ಕರೆಯಲು ಸಾಧ್ಯವೇ ಇಲ್ಲ. ಏಕೆಂದರೆ ಇಲ್ಲಿನ ರಚನೆಗಳು ಹನ್ನೆರಡನೆ ಶತಮಾನದ ವಚನಗಳ 'ಆಕೃತಿ' (Form) ಅನ್ನು ಮಾತ್ರ ಬಳಸಿಕೊಂಡದ್ದು; 'Condent' (ವಸ್ತು)ವನ್ನಲ್ಲ. ಇಲ್ಲಿಯೂ ಅಂಕಿತವಿಲ್ಲದೆ ವಚನ ಬರೆದ ಬೇಂದ್ರೆ, ಕುವೆಂಪು ಮತ್ತು ಆನಂದರಿದ್ದಾರೆ. ಆಧುನಿಕ ವಚನಕಾರರೆನಿಸಿದ ಹರ್ಡೇಕರ್ ಮಂಜಪ್ಪ ಇದ್ದಾರೆ, ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಪಡೆದ ಎಸ್.ವಿ. ರಂಗಣ್ಣ ಇದ್ದಾರೆ; ಕಲಕತ್ತೆಯ 'ಭಾಷಾ ಸನ್ಮಾನ್' ಪಡೆದ ಸಿದ್ದಯ್ಯ ಪುರಾಣಿಕರಿದ್ದಾರೆ. ಸೊಗಸಾದ ರಚನೆಗಳನ್ನು ಮಾಡಿದ ಎಸ್.ವಿ. ಪರಮೇಶ್ವರಭಟ್ಟರು, ಮಹಾದೇವ ಬಣಕಾರರು - ಹೀಗೇ ಈ ಪಟ್ಟಿ ಬೆಳೆಯುತ್ತ ಹೋಗುತ್ತಿದೆ.

ವಚನ ಚಳುವಳಿಗಳ ನಿಜವಾದ ಘಟ್ಟ ಹನ್ನೆರಡನೆ ಶತಮಾನ. ಇನ್ನುಳಿದ ಎರಡೂ ಘಟ್ಟಗಳು ಅಷ್ಟು ಮಹತ್ವವಲ್ಲ ಎಂದರೂ ಎರಡನೆಯ ಘಟ್ಟ ಇದ್ದುದರಲ್ಲಿ ಮೊದಲ ಘಟ್ಟದ ವಚನಕಾರರ ಹೆಜ್ಜೆಯಲ್ಲೇ ಹೆಜ್ಜೆಯಿಟ್ಟು ನಡೆದದನ್ನು ಗಮನಿಸಬಹುದು.

ವಚನ ಚಳುವಳಿ ಒಂದು ಸಾಹಿತ್ಯಿಕ ಚಳುವಳಿ ಅಲ್ಲ; ಅದೊಂದು ಧಾರ್ಮಿಕವೂ ಸಾಹಿತ್ಯಿಕವೂ ಹಾಗೆಯೇ ಸಾಮಾಜಿಕವೂ ಆದ ಮಹತ್ವದ ಚಳುವಳಿ. ಇಂಥ ಚಳುವಳಿಗಳು ರಾಷ್ಟ್ರದ ಸಾಂಸ್ಕೃತಿಕ ಸಂಸ್ಕೃತಿಗೆ ಮಹತ್ವದ ಕಾಣಿಕೆ ನೀಡುತ್ತ ಬಂದಿವೆ ಎಂಬುದು ಐತಿಹಾಸಿಕವಾದ ಸಂಗತಿಯಾಗಿದೆ.



# ಜನಪದರ ದೃಷ್ಟಿಯಲ್ಲಿ ಕಾಯಕ ಮತ್ತು ದಾಸೋಹ

– ಎಚ್.ಎಸ್. ಸಿದ್ಧಗಂಗಪ್ಪ *

**ಕ**ರ್ನಾಟಕದ ಸಾಮಾಜಿಕ, ಸಾಂಸ್ಕೃತಿಕ, ಸಾಹಿತ್ಯಿಕ ಹಾಗೂ ಧಾರ್ಮಿಕ ಇತಿಹಾಸವನ್ನು ಅವಲೋಕಿಸಿದಾಗ ೧೨ನೇ ಶತಮಾನ ಒಂದು ಉತ್ಕರ್ಷ ಕಾಲ. ಮೌಢ್ಯ ಕಂದಾಚಾರಗಳ ಕತ್ತಲೆಯಲ್ಲಿ ತೊಳಲಾಡುತ್ತಿದ್ದ ಜನರ ಹೃದಯ ಮಂದಿರದಲ್ಲಿ ಅರಿವಿನ ಜ್ಯೋತಿಯನ್ನು ಬೆಳಗಿಸಿದ ಪರ್ವಕಾಲ. ಬಸವಣ್ಣನವರ ನೇತೃತ್ವದಲ್ಲಿ ನಡೆದ ಸಾಮಾಜಿಕ ಕ್ರಾಂತಿ, ಅನುಭಾವದ ಮೇರು ಶಿಖರ ಅಲ್ಲಮಪ್ರಭುವಿನ ಸಮ್ಮುಖದಲ್ಲಿ ಬಸವಾದಿ ಶರಣರು ಅನುಭವ ಮಂಟಪದಲ್ಲಿ ನಡೆಸಿದ ವಿಚಾರಮಂಥನ ಮೇಲು ಕೀಳು ಎಂಬ ಭೇದ ಭಾವವಿಲ್ಲದೆ ಎಲ್ಲರೂ ತಮ್ಮ ತಮ್ಮ ಅಭಿಪ್ರಾಯಗಳನ್ನು ಮುಕ್ತವಾಗಿ ತಿಳಿಸುವ ಅಭಿವ್ಯಕ್ತಿ ಸ್ವಾತಂತ್ರ್ಯ ನಾಲ್ಕು ಗೋಡೆಗಳ ಮಧ್ಯೆ ತಮ್ಮ ಜೀವನವನ್ನು ನಡೆಸುತ್ತಿದ್ದ ಸ್ತ್ರೀಯರು ಅನುಭವ ಮಂಟಪದಲ್ಲಿ ಮುಕ್ತವಾಗಿ ಭಾಗವಹಿಸಿ ತಮ್ಮ ವಿಚಾರಗಳನ್ನು ಮಂಡಿಸುವ ವಾಕ್ ಸ್ವಾತಂತ್ರ್ಯ- ಇವೆಲ್ಲವೂ ಹನ್ನೆರಡನೆ ಶತಮಾನದಲ್ಲಿ ನಡೆದ ಸಾಧನೆಯ ಮೈಲುಗಲ್ಲುಗಳು. ತಮ್ಮ ಮನದ ಭಾವನೆಗಳನ್ನು ಅಭಿವ್ಯಕ್ತಿ ಪಡಿಸಲು ಅವರು ಜನಸಾಮಾನ್ಯರಿಗೂ ಸುಲಭವಾಗಿ ಅರ್ಥ ವಾಗುವಂತೆ 'ವಚನ'ಗಳನ್ನು ರಚಿಸಿ, ಜನಜಾಗೃತಿಯನ್ನುಂಟು ಮಾಡಿದರು. ಕನ್ನಡ ಸಾಹಿತ್ಯ ಕ್ಷೇತ್ರದ ಇತಿಹಾಸದಲ್ಲಿ ಒಂದು ಮಹತ್ತರ ಬದಲಾವಣೆ. ಸಮಾನತೆ, ಅಸ್ಪೃಶ್ಯತೆ, ಮೂಢನಂಬಿಕೆ, ಕಂದಾಚಾರಗಳ ನಿವಾರಣೆಗೆ ಶರಣರು ನಡೆಸಿದ ಹೋರಾಟ ಅನುಪಮವಾದುದು. ಪ್ರತಿಯೊಬ್ಬರಲ್ಲೂ ವೃತ್ತಿ ಗೌರವವನ್ನು ತಂದುಕೊಟ್ಟು ಅವರಲ್ಲಿ ಆತ್ಮಾಭಿಮಾನವನ್ನು ಮೂಡಿಸಲು ನಡೆಸಿದ ಪ್ರಯತ್ನದ ಫಲವಾಗಿ ಅವರ ಬದುಕಿಗೊಂದು ಅರ್ಥವನ್ನು ತಂದು ಕೊಟ್ಟಿದ್ದು ಸಾಮಾನ್ಯ ವಿಚಾರವಲ್ಲ.

ಬಸವಣ್ಣನವರು ಸಾಮಾಜಿಕ ಹಾಗೂ ವೈಚಾರಿಕ ಆಂದೋಲನದ ಜೊತೆಗೆ ಅವರು ವಿಶ್ವಕ್ಕೆ ನೀಡಿದ ಬಹು ದೊಡ್ಡ ಕೊಡುಗೆ ಎಂದರೆ **'ಕಾಯಕ'** ಮತ್ತು **'ದಾಸೋಹ'** ಪರಿಕಲ್ಪನೆ. ಮಹತ್ವಪೂರ್ಣವಾದುದು. ಇಂತಹ ವಿಶಿಷ್ಟವಾದ ಸಿದ್ಧಾಂತವನ್ನು ಅನುಷ್ಠಾನಗೊಳಿಸಿ ಇಡೀ ವಿಶ್ವವೇ ವಿಸ್ಮಯದಿಂದ ನೋಡುವಂತೆ ಮಾಡಿದ ಹೆಗ್ಗಳಿಕೆ ಬಸವಾದಿ ಶರಣರಿಗೆ ಸಲ್ಲುತ್ತದೆ.

ಕಾಯಕ ಮತ್ತು ದಾಸೋಹದ ಪರಿಕಲ್ಪನೆ, ಈ ಪದಗಳಿಗೆ ಸಂವಾದಿಯಾಗಿ ಬೇರೊಂದು ಪದ ಮತ್ತು ಅರ್ಥಸಂಪತ್ತು ವಿಶಿಷ್ಟವಾದುದು. ಈ ಪದಸಂಪತ್ತು ನೋಡುವುದಕ್ಕೆ ವಾಮನನಂತಿದ್ದರೂ ಒಳಹೊಕ್ಕು ಅರ್ಥೈಸಿದಂತೆಲ್ಲ ನಮಗೆ ಅವುಗಳ ವಿರಾಟ ದರ್ಶನವಾಗುತ್ತದೆ.

ಬಸವಾದಿ ಶರಣರು ರೂಪಿಸಿ ಅನುಷ್ಠಾನಕ್ಕೆ ತಂದ ಕಾಯಕ ಸಿದ್ಧಾಂತಕ್ಕೆ ಮೇಲು-ಕೀಳು, ಉಚ್ಚ-ನೀಚ ಎಂಬ ತಾರತಮ್ಯವಿರಲಿಲ್ಲ. ತಾವು ಮಾಡುವ ವೃತ್ತಿಯಲ್ಲಿಯೇ, ಅದು ಸಮಾಜದ ದೃಷ್ಟಿಯಲ್ಲಿ ಮೇಲಾಗಿರಲಿ, ಕೀಳಾಗಿರಲಿ, ಕೈಲಾಸವನ್ನು ಕಾಣುವ ದಾರ್ಶನಿಕತೆ. ಕಷ್ಟಪಟ್ಟು ಬೆವರು ಸುರಿಸಿ ದುಡಿದು ಮಾಡಿದ ಕಾಯಕಕ್ಕೆ ಅವರು ಮಹತ್ವವನ್ನು ಕೊಟ್ಟರು. 'ಕಾಯಕ' ಎಂಬ ಮಾತು ಹೊಟ್ಟೆಪಾಡಿಗಾಗಿ ಕೈಗೊಂಡ ಉದ್ಯೋಗ ಎಂದಷ್ಟೇ ಅರ್ಥವನ್ನುಳ್ಳದ್ದಲ್ಲ. ಪ್ರತಿಯೊಬ್ಬರೂ ತಮ್ಮ ತಮ್ಮ ಜೀವನದ ನಿರ್ವಹಣೆಗಾಗಿ ಉದ್ಯೋಗವನ್ನು ಕೈಗೊಳ್ಳಲೇಬೇಕಾದುದು ಅವಶ್ಯಕ. ಇನ್ನೊಬ್ಬರ ದುಡಿಮೆಯನ್ನು ಕುಳಿತು ತಿನ್ನುವ ಹಕ್ಕು ನಮಗಿಲ್ಲ. ದೇಹ ಶ್ರಮದಿಂದಲೇ ನಮ್ಮ ಅನ್ನವನ್ನು ನಾವು ಸಂಪಾದಿಸಿಕೊಳ್ಳಬೇಕು. ಅದರಿಂದಲೇ ನಮ್ಮ ಜೀವನ ನಡೆಯಬೇಕು. ಶರಣರು ನೀಡಿದ 'ಕಾಯಕ' ಎಂಬುದಕ್ಕೆ ಇಷ್ಟೇ ಅರ್ಥ ಅಲ್ಲ, ಅದು ಇನ್ನೂ ವ್ಯಾಪಕವಾದುದು. ತಾನು ಕೈಗೊಂಡ ವೃತ್ತಿ ಸಮಾಜಕ್ಕೆ ಹಾನಿಕಾರಕವಾಗಿರಬಾರದು. ಸಮಾಜದ ಅವಶ್ಯಕತೆಗಳನ್ನು ಪೂರೈಸುವಂತಿರಬೇಕು. ಅದರ ಫಲ ತನಗೆ ಮಾತ್ರವೇ ಅಲ್ಲದೆ, ಸಮಾಜಕ್ಕೂ ದೊರೆಯಬೇಕು ಎಂಬುದಕ್ಕೆ ಶರಣರು ವಿಶೇಷವಾದ ಮಹತ್ವವನ್ನು, ಬೆಲೆಯನ್ನು ಕೊಟ್ಟರು.

ಶರಣರು ರೂಪಿಸಿದ ಕಾಯಕ ತತ್ವದಲ್ಲಿ ನೀತಿ-ನಿಯಮಗಳನ್ನು ಪಾಲಿಸಬೇಕಾಗಿತ್ತು. **ಸತ್ಯ, ನೀತಿ, ಪ್ರಾಮಾಣಿಕತೆಯ ನೆಲಗಟ್ಟಿನ ಮೇಲೆ ನಿಂತು ತ್ರಿಕರಣ ಶುದ್ಧಿಯಾಗಿ ಕಾಯಕವನ್ನು ಮಾಡಿ, ಅದರಿಂದ ಬಂದ ಫಲದಲ್ಲಿ ತನಗೆ ಬೇಕಾದಷ್ಟನ್ನು ಮಾತ್ರ ಇಟ್ಟುಕೊಂಡು ಉಳಿದುದನ್ನು ಸಮಾಜದ ದುರ್ಬಲ ವರ್ಗದವರಿಗೆ ವಿನಿಯೋಗಿಸುವುದರ ಮೂಲಕ ಸಂತೋಷ, ತೃಪ್ತಿಯನ್ನು ಕಾಣುವುದು ಶರಣರ ಆಶಯವಾಗಿತ್ತು.** ಸಮಾಜದ ಸಮಗ್ರ ಅಭಿವೃದ್ಧಿಯಾಗಬೇಕಾದರೆ, ಸ್ವಯಂ ಪೂರ್ಣವಾಗಬೇಕಾದರೆ ಎಲ್ಲರೂ ತಮ್ಮ ತಮ್ಮ ಉದ್ಯೋಗಗಳನ್ನು ನಿಷ್ಠೆಯಿಂದ ಮಾಡಬೇಕು. ಕಾಯಕದ ಮಹತ್ವವನ್ನು ಅರಿಯಬೇಕು ಎಂದು ಒತ್ತಿ ಹೇಳಿದ್ದಾರೆ.

* ೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ೮ನೇ ಬ್ಲಾಕ್, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧





ದೇಹಶ್ರಮದಿಂದ ಕಾಯಕ ಮಾಡಲು ಶಕ್ತಿಯಿದ್ದರೂ, ಭಿಕ್ಷೆ ಬೇಡುವುದನ್ನು ಅವರು ಕಟುವಾಗಿ ಖಂಡಿಸಿದರು. ಇನ್ನೊಬ್ಬರ ಹಂಗಿನಲ್ಲಿ, ನಡೆಸುವ ಜೀವನ, ಜೀವನವೇ ಅಲ್ಲ ಎಂಬುದನ್ನು ಸಾರಿ ಹೇಳಿದರು. ಬಸವಣ್ಣನವರು ಹೇಳಿರುವಂತೆ "ಅನ್ಯರ ಮನೆಗೆ ಹೋಗಿ ತನ್ನುದರವ ಹೊರೆಯದ ಅಚ್ಚ ಶರಣರ ಕಂಡರೆ ನಿಶ್ಚಯವಾಗಿ ಕೂಡಲ ಸಂಗಯ್ಯನೆಂಬೆ." ಅಂತಹ ಗುಣವುಳ್ಳ ಶರಣರನ್ನು ನಾವಿಂದು ಹುಡುಕಬೇಕಾದರೆ ತುಂಬ ಶ್ರಮ ಪಡಬೇಕಾಗುವುದು. ಅಂತವರು ಸಾವಿರಕ್ಕೆ ಒಬ್ಬರು ಸಿಕ್ಕಿದ್ದರೂ ಆರೋಗ್ಯವಂತ ಸಮಾಜ ನಿರ್ಮಾಣ ವಾಗಬಹುದೇನೋ!

ಕಾಯಕದಿಂದ ಯಾರೂ ತಪ್ಪಿಸಿಕೊಳ್ಳುವಂತಿಲ್ಲ ಎಂಬುದನ್ನು ನುಲಿಯ ಚಂದಯ್ಯನ ವಚನ ಸ್ಪಷ್ಟಪಡಿಸುತ್ತದೆ. ಅವನು ಹಗ್ಗ ಹೊಸೆಯುವ ಕಾಯಕವನ್ನು ಕೈಗೊಂಡಿದ್ದನು. ಹಗ್ಗ ಹೊಸೆಯುತ್ತಲೇ ಆಧ್ಯಾತ್ಮಿಕ ಸಾಧನೆಯ ಮೆಟ್ಟಿಲುಗಳನ್ನು ಏರಿದವನು.

*ಗುರುವಾದಡೂ ಕಾಯಕದಿಂದಲೇ ಜೀವನ್ಮುಕ್ತಿ*
*ಲಿಂಗವಾದಡೂ ಕಾಯಕದಿಂದ ಶಿಲೆಯ ಕುಲ ಹರಿವುದು*
*ಜಂಗಮವಾದರೂ ಕಾಯಕದಿಂದ ವೇಷದ ಪಾಶ ಹರಿವುದು*
*ಇದು ಚನ್ನಬಸವಣ್ಣ ಪ್ರಿಯ ಚಂದೇಶ್ವರ ಲಿಂಗದ ಅರಿವು*

ಎಂದು ಹೇಳುವುದರ ಮೂಲಕ ಆಗಿನ ಕಾಲದಲ್ಲಿ ಉನ್ನತ ಸ್ಥಾನದಲ್ಲಿದ್ದ ಗುರು ಲಿಂಗ ಜಂಗಮರೂ ಕಾಯಕ ಮಾಡಿ ಜೀವನ ಸಾಗಿಸಬೇಕು. ಕಾಯಕದಿಂದ ದೇವರಿಗೂ ವಿನಾಯಿತಿ ಇಲ್ಲ ಎಂದು ಹೇಳುವುದರ ಮೂಲಕ ಕಾಯಕ ಸಿದ್ಧಾಂತಕ್ಕೆ ಒಂದು ಹೊಸ ಆಯಾಮವನ್ನು ತಂದುಕೊಟ್ಟಿದ್ದಾನೆ.

ಶರಣರು ಕಾಯಕ ಸಿದ್ಧಾಂತವನ್ನು ಸಮಾಜಕ್ಕೆ ಕೊಡುವುದರ ಮೂಲಕ ಒಂದು ವಿಶಿಷ್ಟ ಸಂಪ್ರದಾಯವನ್ನು ಹುಟ್ಟು ಹಾಕಿದರು. ಕಾಯಕಕ್ಕೆ ಸಮಾನ ಗೌರವ ಸ್ಥಾನಮಾನವನ್ನು ನೀಡುವುದರ ಮೂಲಕ ಆದರ್ಶ ಸಮಾಜ ರಚನೆಗೆ ನಾಂದಿ ಹಾಡಿದರು. ಆದರ್ಶ ಸಮಾಜದ ಗುರಿ, ಕನಸು ಶರಣರ ಮಹೋದ್ದೇಶವಾಗಿತ್ತು. ವ್ಯಕ್ತಿ ಯಾವುದೇ ಉದ್ಯೋಗವನ್ನು ಕೈಗೊಂಡಿರಲಿ, ಆ ಉದ್ಯೋಗ ಅವನಿಗೆ ಅಭಿವೃದ್ಧಿಯ ಮೆಟ್ಟಿಲುಗಳನ್ನೇರಲು ಅವಕಾಶವಾಗಬೇಕು. ಮೇಲು-ಕೀಳೆಂಬ ಉದ್ಯೋಗದ ತಾರತಮ್ಯ ಅವರ ಮನಸ್ಸಿನಿಂದ ದೂರ ಉಳಿಯಬೇಕು. ಯಾವುದೇ ಉದ್ಯೋಗವಾಗಲಿ, ಕಾಯಕವಾಗಲಿ ಪರಿಣಮಿಸಿದಾಗ, ಆ ಉದ್ಯೋಗಗಳು ಸಾಧನೆಗೆ ಅಡ್ಡಿಯಾಗುವುದಿಲ್ಲವೆಂದು ಶರಣರು ಸಾರಿದರು. ಸಾರುವುದಷ್ಟೇ ಅಲ್ಲ, ಆಚರಣೆಗೂ ತಂದರು. ಮಡಿವಾಳ ಮಾಚಯ್ಯ, ಮೇದಾರ ಕೇತಯ್ಯ, ಅಂಬಿಗರ ಚೌಡಯ್ಯ, ತುರುಗಾಹಿ ರಾಮಣ್ಣ, ಸುಂಕದ ಬಂಕಣ್ಣ, ಮಾದಾರ ಧೂಳಯ್ಯ, ಗಾಣದ ಕನ್ನಪ್ಪ, ವೈದ್ಯ ಸಂಗಣ್ಣ, ಕೊಟ್ಟಣದ ರೆಮ್ಮವ್ವೆ, ಮೋಳಿಗೆ ಮಾರಯ್ಯ, ಹೂಗಾರ ಮಾದಯ್ಯ, ಮೊದಲಾದ ಶರಣರು ಸಾಧನೆಯ ಸಾಕಾರಮೂರ್ತಿಗಳಾಗಿದ್ದಾರೆ. ಇವರೆಲ್ಲ ಬೇರೆ ಬೇರೆ ವೃತ್ತಿಯನ್ನು ಕೈಗೊಂಡಿದ್ದವರು. ದನಕಾಯುವುದು, ದೋಣಿ ನಡೆಸುವುದು, ಬಟ್ಟೆ ಬಗೆಯುವುದು, ಚಪ್ಪಲಿ ಹೊಲಿಯುವುದು, ಗಾಣ ಆಡಿಸುವುದು, ಬುಟ್ಟಿ ಮಾಡುವುದು – ಇವೇ ಮೊದಲಾದ ಉದ್ಯೋಗದಲ್ಲಿದ್ದ ಶರಣರು ಅನುಭವ ಮಂಟಪಕ್ಕೆ ಬಂದಾಗ ಬಸವಣ್ಣನವರಿಗೆ ಸರಿಸಮಾನರಾಗಿ ಕುಳಿತು ಆಧ್ಯಾತ್ಮಿಕ ಸಾಧನೆಯ ಚರ್ಚೆಯಲ್ಲಿ ಮುಕ್ತವಾಗಿ ಭಾಗವಹಿಸಿ ತಮ್ಮ ಭಾವನೆಗಳನ್ನು ಅಭಿವ್ಯಕ್ತಿ ಪಡಿಸುತ್ತಿದ್ದರು.

ಬಸವಾದಿ ಶರಣರು ರೂಪಿಸಿದ ಕಾಯಕವು ಸಮಾಜದ ಉನ್ನತಿಗೆ ಕಾರಣವಾದಂತೆ, ಅವರ ಆಧ್ಯಾತ್ಮಿಕ ಸಾಧನೆಗೂ ದಾರಿದೀಪವಾಗಿದೆ. ಸಾಮಾಜಿಕ ಹಿತ ಮತ್ತು ಜೀವನ ಮಾರ್ಗ ಎರಡನ್ನೂ ಏಕಕಾಲದಲ್ಲಿ ಸಾಧಿಸುವ ಪರಿಪೂರ್ಣ ಜೀವನ ಮಾರ್ಗವನ್ನು ನಾವಿಲ್ಲಿ ಕಾಣಬಹುದು. ಕಾಯಕದ ವಿಶೇಷತೆ ಎಂದರೆ ಪ್ರತಿಯೊಬ್ಬರೂ ತನಗೆ ಅಗತ್ಯವಾದಷ್ಟನ್ನು ಮಾತ್ರ ತೆಗೆದುಕೊಂಡರೆ ಸಮಾಜದಲ್ಲಿ ಯಾರೂ ತಮಗಿಲ್ಲವೆಂದು ಕೊರಗಬೇಕಾಗಿಲ್ಲ. ಆದರೆ ಅತಿ ಆಸೆಯಿಂದ ತನ್ನ ಅವಶ್ಯಕತೆಗಳಿಗೆ ಮೀರಿ. ಎಲ್ಲವೂ ತನಗೇ ಬೇಕೆಂದು ಸಂಗ್ರಹಿಸಿಟ್ಟುಕೊಂಡಾಗ ಸಮಾಜದಲ್ಲಿ ಅಸಮತೆ ಹೆಚ್ಚುತ್ತದೆ. ವಿರಸ ಉಂಟಾಗುತ್ತದೆ. ಬೆಳಗಾವಿಯಲ್ಲಿ ನಡೆದ ಕಾಂಗ್ರೆಸ್ ಮಹಾಧಿವೇಶನದಲ್ಲಿ ಗಾಂಧೀಜಿಯವರು ಭಾಗವಹಿಸಿದ ಸಂದರ್ಭದಲ್ಲಿ ಬಸವಣ್ಣನವರ ವಚನ ಸಂಗ್ರಹವನ್ನು ಕಾರ್ಯಕರ್ತರು ನೀಡಿದರು. ಅದನ್ನು ಓದಿದ ಗಾಂಧೀಜಿಯವರು ಶರಣರ ಈ ಅಭಿಪ್ರಾಯಕ್ಕೆ ಒಂದು ಕಡೆ ಸಹಮತ ವ್ಯಕ್ತಪಡಿಸಿದ್ದಾರೆ:

"Nature produces enough for our wants from day to day; and if every body took enough for himself and nothing more, there would be no pauparism in this world, There will be no man dying of starvation."

ತನ್ನ ಅವಶ್ಯಕತೆಗಳಿಗೆ ಅಗತ್ಯವಾದಷ್ಟನ್ನು ಮಾತ್ರ ಇಟ್ಟುಕೊಳ್ಳುವ ಈ ಅಸಂಗ್ರಹ ತತ್ತ್ವವನ್ನು ಕಾಯಕ ಒಳಗೊಂಡಿದೆ. ಗಾಂಧೀಜಿಯವರು ಹೇಳುವ ಎಲ್ಲ ಅಂಶಗಳನ್ನು ಕಾಯಕ ಒಳಗೊಂಡಿದೆ. ಅಲ್ಲದೆ ಅದು ಕೇವಲ ಬೌದ್ಧಿಕ ವಿಶ್ಲೇಷಣೆಯಲ್ಲಿ ಮಾತ್ರ ಉಳಿಯದೆ ಜನಸಾಮಾನ್ಯರ ನಡೆ-ನುಡಿಗಳಿಗೂ ಇಳಿದು ಜೀವಂತ ಸಾಂಸ್ಕೃತಿಕ ಶಕ್ತಿಯಾಗಿ ಒಡಮೂಡಿದ್ದು ಒಂದು ಚಾರಿತ್ರಿಕ ಸತ್ಯ. ಆದ್ದರಿಂದಲೇ ಲಕ್ಕಮ್ಮನಂತಹ ಒಬ್ಬ ಸಾಮಾನ್ಯ ಸ್ತ್ರೀ ಮತ್ತು ಅಂತಹ ನೂರಾರು ಜನ ಸಾಮಾನ್ಯರು ಇದನ್ನು ಸಾಧಿಸಿ ತೋರಿಸುವುದಕ್ಕೆ ಸಾಧ್ಯವಾಯಿತು.

ಪ್ರಸ್ತುತ ಪರಿಸ್ಥಿತಿಯನ್ನು ಅವಲೋಕಿಸಿದಾಗ ಬಸವಣ್ಣನವರ ನೇತೃತ್ವದಲ್ಲಿ ಸಾವಿರಾರು ಜನ ಶರಣರು ರೂಪಿಸಿ

ಅನುಷ್ಠಾನಗೊಳಿಸಲು ಕಾಯಕ ತತ್ತ್ವ ಇಂದು ಕೇವಲ ಮಾತುಗಳಲ್ಲಿ ವೇದಿಕೆಯ ಭಾಷಣಕ್ಕಷ್ಟೇ ಸೀಮಿತವಾಗಿರುವುದು ಸಮಾಜಕ್ಕೆ ಒದಗಿದ ಒಂದು ದೊಡ್ಡ ದುರಂತ. ಕಾಯಕದಲ್ಲಿ ಕಂಡು ಬರುವ ತಾರತಮ್ಯ, ನೋಡುವ ದೃಷ್ಟಿ, ನೀಡುವ ಗೌರವ ಇವುಗಳಿಂದ 'ಕಾಯಕ' ಸಿದ್ಧಾಂತ ತನ್ನ ಮೌಲ್ಯವನ್ನು ಕಳೆದುಕೊಂಡಿದೆಯೇನೋ ಎನಿಸುತ್ತದೆ. ಇವತ್ತು ಸಮಾಜದಲ್ಲಿ ತಾಂಡವವಾಡುತ್ತಿರುವ ಅಸಮಾನತೆ, ಅಸೂಯೆ, ದ್ವೇಷ, ಭ್ರಷ್ಟಾಚಾರ ಇವುಗಳಿಗೆಲ್ಲ ಮೂಲ ಕಾರಣ ಉಳ್ಳವರ ಸಂಗ್ರಹ ಬುದ್ಧಿ. ಇದರಿಂದ ಉಳ್ಳವರು ಮತ್ತು ಇಲ್ಲದವರ ನಡುವಿನ ಅಂತರ ವಿಸ್ತಾರವಾಗುತ್ತಿದೆ. ಹಣ ಗಳಿಸಬೇಕೆಂಬ ಒಂದೇ ಒಂದು ಕಾರಣದಿಂದ ಕಾಯಕ ಸಿದ್ಧಾಂತವನ್ನು ಗಾಳಿಗೆ ತೂರಿ ಅಪ್ರಮಾಣಿಕತೆ ಹಾಗೂ ಎಲ್ಲವೂ ತನಗೆ ಬೇಕು ಎಂಬ ಅತಿಯಾಸೆಯಿಂದ ಸಮಾಜದ ಅಭಿವೃದ್ಧಿ ಕುಂಠಿತವಾಗುತ್ತಿದೆ. ನಮ್ಮ ದುಡಿಮೆಗಿಂತ ಹೆಚ್ಚಿನ ಪ್ರತಿಫಲವನ್ನು ಪಡೆಯುವುದು ದುರಾಸೆ. ಶ್ರಮಪಡದೆ ಪ್ರತಿಫಲವನ್ನು ಬಯಸುವುದು ಕಾಯಕತತ್ತ್ವಕ್ಕೆ ವಿರುದ್ಧವಾದುದು. ಒಂದು ರೂಪಾಯಿನ ಲಾಟರಿ ಟಿಕೆಟ್ಟನ್ನು ಕೊಂಡು ಒಂದು ಲಕ್ಷ ರೂಪಾಯಿ ತನಗೆ ಬರುತ್ತದೆಂದೂ ಹಗಲು ಕನಸು ಕಾಣುತ್ತ, ಅಂತಹ ಹಣಕ್ಕೆ ಬಾಯಿ ಬಿಡುವ ಇಂದಿನ 'ಲಾಟರಿ ಸಂಸ್ಕೃತಿಯ' ಹಿನ್ನೆಲೆಯಲ್ಲಿ ಈ ಕಾಯಕ ಸಂಸ್ಕೃತಿಯನ್ನು ಪರಿಭಾವಿಸಬೇಕು.

ಲಕ್ಕಮ್ಮ ಒಬ್ಬ ಸಾಮಾನ್ಯ ಸ್ತ್ರೀ. ತನ್ನ ಗಂಡ ಅಗತ್ಯಕ್ಕಿಂತಲೂ ಹೆಚ್ಚು ಅಕ್ಕಿಯನ್ನು ಆಯ್ದು ತಂದಾಗ ಪ್ರತಿಭಟಿಸಿ ಹಿಂದಕ್ಕೆ ಕಳುಹಿಸುವ ಆಕೆಯ ದಿಟ್ಟತನ ಇಂದಿನ ಸ್ತ್ರೀ ಸಮೂಹಕ್ಕೆ ಆದರ್ಶಪ್ರಾಯ. ಆಕೆ ತನ್ನ ಗಂಡ ಮಾರಯ್ಯನಿಗೆ–

*"ಮನ ಶುದ್ಧವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ*
*ಚಿತ್ತ ಶುದ್ಧದಲ್ಲಿ ಕಾಯಕವ ಮಾಡುವಲ್ಲಿ*
*ಸದ್ಭಕ್ತಂಗೆ ಎತ್ತ ನೋಡಿದೊಡತ್ತ ಲಕ್ಷ್ಮಿ ತಾನಾಗಿಪ್ಪಳು;*
*ಮಾರಯ್ಯ ಪ್ರಿಯ ಅಮರೇಶ್ವರ ಲಿಂಗದ*
*ಸೇವೆಯುಳ್ಳನ್ನಕ್ಕ."*

ಎಂದು ಹೇಳುತ್ತಾಳೆ. ಇಲ್ಲಿ ಕಾಯಕದ ಮಹತ್ವವನ್ನು ಕಾಣುವುದರ ಜೊತೆಗೆ ಇನ್ನೊಂದು ಮುಖ್ಯವಾದ ಅಂಶವನ್ನು ನಾವಿಲ್ಲಿ ಗಮನಿಸಬೇಕು. ಸ್ತ್ರೀಯರು ಆಧ್ಯಾತ್ಮಿಕ ಮಾರ್ಗಗಳಲ್ಲಿ ಎಂತಹ ಉನ್ನತ ಮಟ್ಟಕ್ಕೇರಿದರೆಂಬುದನ್ನು ಲಕ್ಕಮ್ಮನ ಮಾತುಗಳಲ್ಲಿ ಕಂಡುಕೊಳ್ಳಬಹುದು. ಇದು ವೀರಶೈವ ಸಂಸ್ಕೃತಿಯ ಮಹತ್ವಪೂರ್ಣ ಸಾಧನೆ.

'ದಾಸೋಹ'ವು ಕಾಯಕದ ಮತ್ತೊಂದು ಮುಖ. ಒಂದು ರೀತಿಯಲ್ಲಿ ಕಾಯಕ ಮತ್ತು ದಾಸೋಹಗಳು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಒಂದು ಮತ್ತೊಂದಕ್ಕೆ ಪೂರಕ. ಹಾಲಿನಲ್ಲಿ ತುಪ್ಪ ಅಂತರ್ಗತವಾಗಿರುವಂತೆ ಕಾಯಕ ತತ್ತ್ವದಲ್ಲಿ ದಾಸೋಹ ತತ್ತ್ವವೂ ಇದೆ. ಶರಣರು ದಾಸೋಹ ತತ್ತ್ವವನ್ನು ತುಂಬಾ ಅರ್ಥಪೂರ್ಣವಾಗಿ ವಿವೇಚಿಸಿದ್ದಾರೆ. ಅವರು ತಮ್ಮ ಪ್ರಾಮಾಣಿಕ ಆಚರಣೆಯಿಂದ ಅದನ್ನೊಂದು ಸಾಂಸ್ಕೃತಿಕ ಶಕ್ತಿಯನ್ನಾಗಿ ರೂಡಿಸಿಕೊಂಡಿದ್ದರು. ಬಸವಣ್ಣನವರು 'ದಾಸೋಹ'ಕ್ಕೆ ಒಂದು ವಿಶೇಷವಾದ ಅರ್ಥವನ್ನು, ವಿಶಿಷ್ಟವಾದ ಸ್ಥಾನವನ್ನು ತಂದುಕೊಟ್ಟಿದ್ದಾರೆ. **'ದಾಸೋಹಂ'** ಎಂಬ ಅಹಂಕಾರದ ಗೋಡೆಗಳನ್ನು ಕೆಡವಿ, ಸಮಾಜಕ್ಕೆ ನಾನು ಸೇವಕ ಎಂಬ ಕರ್ತವ್ಯ ಪ್ರಜ್ಞೆಯನ್ನು ಸದಾ ಜಾಗೃತವನ್ನಾಗಿ ಇಟ್ಟಿರುತ್ತಾರೆ. 'ಸೋಹಂ' ಎಂದೆನಿಸದಿರಯ್ಯ, 'ದಾಸೋಹಂ' ಎಂದೆನಿಸಯ್ಯ ಎಂದು ಬಸವಣ್ಣನವರು ಕೂಡಲ ಸಂಗಮ ದೇವನಲ್ಲಿ ನಿವೇದಿಸಿಕೊಂಡಿದ್ದಾರೆ.

*"ಸೋಹಂ ಎಂಬುದು ಅಂತರಂಗದ ಮದ ನೋಡಯ್ಯ*
*ಶಿವೋಹಂ ಎಂಬುದು ಬಹಿರಂಗದ ಮದ ನೋಡಯ್ಯ*
*ಈ ದ್ವಂದ್ವವನಳಿದು ದಾಸೋಹಂ ಎಂದೆನಿಸಯ್ಯ*
*ಕಪಿಲಸಿದ್ಧ ಮಲ್ಲಿಕಾರ್ಜುನಾ"*

ಇಂದು ಕರ್ಮಯೋಗಿ ಸಿದ್ಧರಾಮನ ಸ್ಪಷ್ಟನುಡಿ.

ತಾವು ಪ್ರಾಮಾಣಿಕವಾಗಿ ಸತ್ಯ ಶುದ್ಧವಾಗಿ ದೇಹ ದಂಡಿಸಿ ಗಳಿಸಿದ ದುಡಿಮೆಯಲ್ಲಿ ಸ್ವಲ್ಪ ಭಾಗವನ್ನು ವಿನೀತ ಭಾವದಿಂದ ಗುರುಲಿಂಗಜಂಗಮಕ್ಕೆ ದಾಸೋಹ ಮಾಡಬೇಕು. **'ಕಾಯಕವೆಂದು ಕಾಯವ ಬಳಲಿಸದೆ, ತನು ಕರಗದೆ, ಮನ ನೋಯದೆ, ಕಾಡಿ–ಬೇಡಿ ಮಾಡುವುದು ದಾಸೋಹ'**ವಲ್ಲ ಎಂಬುದನ್ನು ಶಿವಲೆಂಕ ಮಂಚಣ್ಣ ಸ್ಪಷ್ಟಪಡಿಸಿದ್ದಾನೆ. ನುಲಿಯ ಚಂದಯ್ಯ ಹೇಳುವಂತೆ **'ಕಾರೆಯ ಸೊಪ್ಪಾದರೂ ಕಾಯಕದಿಂದ ಬಂದುದು ಲಿಂಗಾರ್ಪಿತವಲ್ಲದೆ ದುರಾಶೆಯಿಂ ಬಂದುದು ಅನರ್ಪಿತ'** ಎಂದಿರುವುದು 'ದಾಸೋಹ'ದ ಮಹತ್ವದ ಬಗ್ಗೆ ಮತ್ತೆ ಮತ್ತೆ ಚಿಂತನೆಗೆ ಒಳಗು ಮಾಡುತ್ತದೆ.

ಅರ್ಪಣಾಭಾವದ ತಳಹದಿಯ ಮೇಲೆ ದಾಸೋಹ ತತ್ತ್ವ ನಿಂತಿದೆ. ಕಾಯಕ ಮಾಡದೆ ಈ ಲೋಕದಲ್ಲಿ ಬದುಕುವ ಹಕ್ಕು ಯಾರಿಗೂ ಇಲ್ಲ ಎಂಬ ಶರಣರ ನಿಲುವು ಪ್ರಸ್ತುತ ಸಮಾಜಕ್ಕೆ ತುಂಬಾ ಅಗತ್ಯವಾಗಿದೆ. ಶರಣರು ಬಿಟ್ಟು ಹೋಗಿರುವ ವಿಚಾರಗಳನ್ನು ಸಿದ್ಧಾಂತಗಳನ್ನು ಸ್ವಲ್ಪ ಮಟ್ಟಿಗಾದರೂ ಜೀವನದಲ್ಲಿ ಅಳವಡಿಸಿ ಕೊಂಡರೆ ಸಮಾಜದ ಅಭಿವೃದ್ಧಿಯಾಗುತ್ತದೆ. 'ಪ್ರಸಾದ', 'ದಾಸೋಹ' ಪದಗಳಿಗೆ ಸಮರ್ಪಣ ಭಾವದ ಲೇಪನವಿದೆ, ಭಕ್ತಿಯ ಆರ್ದ್ರತೆಯಿದೆ. ನಾವು ತೆಗೆದುಕೊಳ್ಳುವ ಪ್ರಸಾದ ದೈಹಿಕ ಬೆಳವಣಿಗೆಗಷ್ಟೇ ಸೀಮಿತವಾಗದೆ ಮಾನಸಿಕ ಬೆಳವಣಿಗೆಗೂ ಪೂರಕವಾಗುತ್ತದೆ, ಆಧ್ಯಾತ್ಮಿಕ ಸಾಧನೆಗೆ ಶಕ್ತಿಯನ್ನು ನೀಡುತ್ತದೆ.

'ಪ್ರಸಾದ' ಎನ್ನುವ ಮಾತಿಗೆ 'ಸಿದ್ಧಾಂತ ಶಿಖಾಮಣಿ'ಯಲ್ಲಿ ಮುಖ್ಯವಾಗಿ ಎರಡು ಅರ್ಥಗಳನ್ನು ಹೇಳಿದೆ. ಒಂದು ಮನಸ್ಸಿನ ನೈರ್ಮಲ್ಯ ("ನೈರ್ಮಲ್ಯಂ ಮನಸೋ





ಲಿಂಗಂ ಪ್ರಸಾದ ಇತಿ ಕಥ್ಯತೇ") ಇನ್ನೊಂದು ಶಿವನಿಗೆ ಅರ್ಪಿಸಿದ ಪದಾರ್ಥ ("ಶಿವ ಪ್ರಸಾದೋ ಯದ್ದವ್ಯಂ ಶಿವಾಯ ವಿ ನಿವೇದಿತಂ") ಇವುಗಳಲ್ಲಿ ಮೊದಲನೆಯದು ಅಂತರಿಕ ಅರ್ಥವನ್ನು ಸೂಚಿಸಿದರೆ. ಎರಡನೆಯದು ಬಹಿರಂಗದ ಆಚರಣೆಯ ದ್ಯೋತಕವಾಗಿದೆ. ಬಹಿರಂಗದ ಆಚರಣೆಯಿಂದ ಅಂತರಂಗದ ಕಡೆಗೆ ತಿರುಗಿಸುವ ಮೋಕ್ಷ ದೃಷ್ಟಿಯನ್ನು ಇಲ್ಲಿ ಕಾಣುತ್ತೇವೆ.

ಜೇಡರ ದಾಸಿಮಯ್ಯ ಪ್ರಸಾದದ ಮಹತ್ವವನ್ನು ತುಂಬಾ ಅರ್ಥಪೂರ್ಣವಾಗಿ ವಿವೇಚಿಸಿದ್ದಾನೆ. ಅವನು ಹೇಳುವಂತೆ "ಒಕ್ಕುದು ಪ್ರಸಾದವಲ್ಲ, ಮಿಕ್ಕುದು ಪ್ರಸಾದವಲ್ಲ, ಹತ್ತೆ ಕರೆದಿಕ್ಕುವುದು ಪ್ರಸಾದವಲ್ಲ, ತರ್ಕೈಸಿ ನಿಮ್ಮುವನಪ್ಪಿಕೊಂಡುಡದೆ ನಿಶ್ಚಯ ಪ್ರಸಾದ" ಎಂಬ ಮಾತು ಮನವೀಯವಾದುದು. ದೇವರಿಗೆ ನೈವೇದ್ಯ ಮಾಡಿರುವುದನ್ನು, ಅರ್ಪಿತವಾಗಿ ಉಳಿದುದನ್ನು ಪ್ರಸಾದವೆಂದು ಭಾವಿಸುವುದು ಒಂದು ಹಂತದಲ್ಲಿ ಮಾತ್ರ. ನಿಜವಾದ ಪ್ರಸಾದವೆಂದರೆ ಶಿವನನ್ನೇ ಅಪ್ಪಿಕೊಳ್ಳುವುದು. ಆತನಿಗೆ ತನ್ನನ್ನೇ ಅರ್ಪಿಸಿಕೊಳ್ಳುವುದು.

ಅಲ್ಲಮಪ್ರಭು ಪ್ರಸಾದಿಯ ಲಕ್ಷಣವನ್ನು ಅರ್ಥವತ್ತಾಗಿ ವಿಶ್ಲೇಷಿಸಿದ್ದಾರೆ :

*"ಒಕ್ಕುದು ಪ್ರಸಾದವೆಂಬುದು, ಮಿಕ್ಕುದು*
*ಪ್ರಸಾದವೆಂಬುದು*
*ಒಕ್ಕುದು ಮಿಕ್ಕುದನೆಲ್ಲ ಬೆಕ್ಕು ಕೊಳ್ಳದೆ?*
*ಒಕ್ಕು ಮಿಕ್ಕು ಹೋಗುವ ಸಂಚ ಸಕೀಲವ ಬಲ್ಲರೆ*
*ಗುಹೇಶ್ವರ ಲಿಂಗದಲ್ಲಿ ಅವನೇ ಪರಮ ಪ್ರಸಾದಿ."*

ಶರಣರು ಪ್ರಸಾದಕ್ಕೆ ಪವಿತ್ರವಾದ ಸ್ಥಾನವನ್ನು ನೀಡಿದ್ದಾರೆ. ನಾವು ಸ್ವೀಕರಿಸುವ ಆಹಾರವೆಲ್ಲಾ ಶಿವನ ಪ್ರಸಾದ. ದೇವರ ದಾಸಿಮಯ್ಯ ಹೇಳುವಂತೆ 'ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ' ಎಂಬುದು ಶಿವನ ಕೃಪೆಯಿಂದ ಬೆಳೆದು ಬಂದುದು. ಈ ದೇಹಕ್ಕೆ ಚೈತನ್ಯವನ್ನು ನೀಡುವ ದಿವ್ಯಶಕ್ತಿ ಅನ್ನ. ಅದಕ್ಕೆ 'ಅನ್ನ'ವನ್ನು ಸ್ವೀಕರಿಸುವಾಗ ಪವಿತ್ರ ಭಾವನೆಯಿಂದ ಸ್ವೀಕರಿಸಬೇಕೆನ್ನುತ್ತಾರೆ ಶರಣರು. ಊಟ ಮಾಡುವುದನ್ನು ಪ್ರಸಾದ ತತ್ತ್ವ ಕಲಿಸುತ್ತದೆ. **"ಉಂಡು ಉಳಿಸಬಾರದು"** ಎಂಬುದು ಬಹಳ ಮುಖ್ಯವಾದ ನಿಯಮ. ನಾವು ತೆಗೆದುಕೊಳ್ಳುವ ಪ್ರತಿಯೊಂದು ಅಗುಳೂ ಪವಿತ್ರವಾದುದು. ಅನ್ನದ ಮಹತ್ವವನ್ನು 'ಅನ್ನಂ ಬ್ರಹ್ಮ', 'ಅನ್ನ ದೇವರ ಮುಂದೆ ಇನ್ನು ದೇವರು ಉಂಟೆ' ಮೊದಲಾದ ಮಾತುಗಳಿಂದ ಸ್ಪಷ್ಟಪಡಿಸಿದ್ದಾರೆ. ಅನ್ನವನ್ನು ಲಿಂಗ ಪ್ರಸಾದವೆಂದು ಭಾವಿಸಿದವರು ಶರಣರು. ಒಂದು ಅಗುಳನ್ನು ಬಿಡದೆ ಭುಂಜಿಸಬೇಕೆಂದು ಹೇಳಿ ಅದಕ್ಕೆ ಧರ್ಮೋ–ಸಾಂಸ್ಕೃತಿಕ ಸ್ವರೂಪವನ್ನು ಕೊಟ್ಟರು.

ಇಂತಹ ಪವಿತ್ರ ಭಾವನೆಯಿಂದ; ಉದಾತ್ತವಾದ ದೃಷ್ಟಿಯಿಂದ ರೂಪುಗೊಂಡ ಪ್ರಸಾದ ತತ್ತ್ವ ಇಂದು ಅರ್ಥವನ್ನು ಕಳೆದುಕೊಂಡಿದೆ. ಮದುವೆ ಮುಂತಾದ ಸಮಾರಂಭಗಳಲ್ಲಿ ಎಲೆಯ ಮೇಲೆ ಬಡಿಸಿದ ಪ್ರಸಾದ ಹೇಗೆ ವ್ಯರ್ಥವಾಗುತ್ತದೆ ಎಂಬುದನ್ನು ನೋಡಿದಾಗ ನಿಜಕ್ಕೂ ವ್ಯಸನವಾಗುತ್ತದೆ. ಒಂದು ತುತ್ತಿನ ಹಿಂದೆ ಅನೇಕರ ಶ್ರಮವಿದೆ ಎಂಬುದನ್ನು ಅರ್ಥ ಮಾಡಿಕೊಳ್ಳದ ಜನ ತಮಗೆ ಬೇಕಾದಷ್ಟನ್ನು ಬಡಿಸಿಕೊಳ್ಳದೆ, ಬಹುಪಾಲು ಊಟವನ್ನು ಎಲೆಯ ಮೇಲೆ ಬಿಡುವ ಪ್ರವೃತ್ತಿ ಹೆಚ್ಚಾಗುತ್ತಿದೆ. ಅದೊಂದು ರೀತಿಯ ದೊಡ್ಡಸ್ತಿಕೆಯ ರೂಪವನ್ನು ಪಡೆದುಕೊಳ್ಳುತ್ತಿದೆ. ಇವತ್ತು ಸಮಾಜದಲ್ಲಿ ಸಾವಿರಾರು ಜನ ಒಂದು ಹೊತ್ತಿನ ಅನ್ನಕ್ಕಾಗಿ ಹೋರಾಟ ನಡೆಸುತ್ತಿರುವಾಗ ಉಳ್ಳವರು ಪ್ರಸಾದವನ್ನು ಅಪಮೌಲ್ಯಗೊಳಿಸುತ್ತಿರುವುದು ನಾಗರಿಕ ಸಮಾಜ ತಲೆ ತಗ್ಗಿಸುವಂತಾಗಿದೆ. ಎಲ್ಲಿ ಪ್ರಸಾದಕ್ಕೆ ಗೌರವವನ್ನು ಕೊಡುತ್ತೇವೆಯೋ ಅಲ್ಲಿ ದೇವರಿದ್ದಾನೆ ಎಂಬ ಶರಣರ ವಿಶಾಲ ದೃಷ್ಟಿಯನ್ನು ಅರ್ಥ ಮಾಡಿಕೊಂಡು ಪ್ರಸಾದವನ್ನು ಚಿತ್ತ ಶುದ್ಧದಿಂದ. ಪವಿತ್ರ ಭಾವನೆಯಿಂದ ಸ್ವೀಕರಿಸುವಂತಾದಾಗ ಬಸವಾದಿ ಶರಣರು ರೂಪಿಸಿದ ದಾಸೋಹ ಸಿದ್ಧಾಂತಕ್ಕೆ ಒಂದು ಮೌಲ್ಯ ಬರುತ್ತದೆ.

ಬಸವಣ್ಣನವರ ನೇತೃತ್ವದಲ್ಲಿ ರೂಪಿಸಿ ಅನುಷ್ಠಾನ ಗೊಳಿಸಿದ ಕಾಯಕ ಮತ್ತು ದಾಸೋಹದ ಪರಿಕಲ್ಪನೆ ನಮ್ಮ ಜನಪದರ ಮೇಲೆ ಗಾಢವಾದ ಪ್ರಭಾವವನ್ನು ಬೀರಿದೆ. ಬಸವಪೂರ್ವ ಯುಗದಲ್ಲಿ ಈ ಸಂಪ್ರದಾಯ ಸ್ವಲ್ಪ ಮಟ್ಟಿಗೆ ಪ್ರಚಾರದಲ್ಲಿದ್ದರೂ ಅದಕ್ಕೊಂದು ಮಹತ್ವ, ಮನ್ನಣೆ, ಗೌರವ ಬಂದುದು ಬಸವಣ್ಣನವರ ಕಾಲದಲ್ಲಿ; ಅರ್ಥಾತ್ ೧೨ನೇ ಶತಮಾನದಲ್ಲಿ ಎಂಬುದು ತ್ರಿಪದಿಗಳಿಂದ ತಿಳಿದುಬರುತ್ತದೆ. ನಮ್ಮ ಗ್ರಾಮೀಣರು ಪ್ರಕೃತಿಯ ಆರಾಧಕರು. ಅವರು ತಮ್ಮ ಬಹುತೇಕ ಸಮಯವನ್ನು ನಿಸರ್ಗದ ಮಡಿಲಲ್ಲಿ ಕಳೆಯುವುದರೊಂದಿಗೆ ಪ್ರಕೃತಿಯೊಂದಿಗೆ ಅವಿನಾಭಾವ ಸಂಬಂಧವನ್ನಿಟ್ಟುಕೊಂಡಿದ್ದಾರೆ. ಅವರು ಪ್ರಕೃತಿಯ ಹಾಗೂ ಪ್ರಾಣಿ–ಪಕ್ಷಿಗಳ ಜೀವನ ವಿಧಾನದಲ್ಲಿಯೂ ಕಾಯಕ ತತ್ತ್ವವನ್ನು ಕಂಡು ನಮ್ಮ ಭಾವನೆಗಳನ್ನು ಮುಕ್ತವಾಗಿ ಹಂಚಿಕೊಂಡಿದ್ದಾರೆ.

*ಕೋಳಿ ಕೂಗಿತು ಕೂಗಿ ಹೇಳುತಲಿ ಜನಕೆಲ್ಲ*
*ಇಳೆ ಬೆಳಗುವೊಡೆಯ ಬಂದೆಂದು ಗುಂಗಿಗಳ*
*ಒಳಗೆದ್ದು ಹಾಡಿ ಬನದೊಳಗೆ.*

*ಮೂಡಲದ ಕೆಂಪಿನೊಳು ಹಾಡಿದವು ಹಕ್ಕಿಗಳು*
*ನಾಡ ನುಂಗುತಲಿ ಹೂ ಬಿಸಿಲು – ಕತ್ತಲೆಯು*
*ಓಡಿ ಪಡುವಣಕೆ ದಿನಕಂಜಿ.*

*(ಕನ್ನಡ ಜಾನಪದ ಗೀತೆಗಳು)*

ಪ್ರಾಣಿ ಪಕ್ಷಿಗಳು ತಮ್ಮ ದಿನನಿತ್ಯದ ಕಾಯಕವನ್ನು ಚಾಚೂತಪ್ಪದೆ ಕ್ರಮ ಬದ್ಧವಾಗಿ ಮಾಡುತ್ತಿರುವಾಗ,

ನಮ್ಮ ಜನಪದರಿಗೆ ಶರಣರ ಬಗ್ಗೆ ಅಪಾರವಾದ ಅಭಿಮಾನ. ಅವರ ಕಾಯಕ ಜನಪದರಿಗೆ ಸ್ಫೂರ್ತಿಯನ್ನು ನೀಡಿದೆ. ಶರಣರ ಆಶೀರ್ವಾದದಿಂದ ನಿರೀಕ್ಷೆಗೂ ಮೀರಿ ಬೆಳೆ ಕೈಗೆ ಬಂದಾಗ ಸ್ವಲ್ಪ ಭಾಗವನ್ನಾದರೂ ದಾಸೋಹಕ್ಕೆ ವಿನಿಯೋಗಿಸದಿದ್ದರೆ ಹೇಗೆ? ಅವರು ನೀಡುವ ದಾಸೋಹ ಸದ್ವಿನಿಯೋಗವಾಗ ಬೇಕೆಂಬುದು ಅವರ ಮನದಾಳದ ಆಶಯ. ಅದಕ್ಕೆ ಅವರು ಮಠಗಳಿಗೆ ನೀಡಿ ಧನ್ಯತೆಯನ್ನು ಪಡೆಯುತ್ತಾರೆ.

ಬಸವಾದಿ ಶರಣರ ನಂತರ ಉತ್ತರ ಕರ್ನಾಟಕದಲ್ಲಿಯೂ ಕಾಯಕ ಮತ್ತು ದಾಸೋಹ ಸಿದ್ಧಾಂತದ ಹಿನ್ನೆಲೆಯಲ್ಲಿ ನೂರಾರು ಮಠಗಳು ಆರಂಭವಾದವು. ಆ ಮಠಗಳ ಮೂಲ ಉದ್ದೇಶ ಸಮಾಜಕ್ಕೆ ಶಿಕ್ಷಣ ನೀಡುವುದರ ಜೊತೆಗೆ ಅವರಲ್ಲಿ ಅರಿವಿನ ಜ್ಯೋತಿಯನ್ನು ಬೆಳಗಿ ಅವರ ಬಾಳು ಹಸನಾಗುವಂತೆ ಮಾಡುವುದಾಗಿತ್ತು. ಜನರಿಗೆ ಕಾಯಕದ ಮಹತ್ವವನ್ನು ಮನವರಿಕೆ ಮಾಡಿಕೊಡುವುದರ ಜೊತೆಗೆ ತಮ್ಮ ಇತಿಮಿತಿಯಲ್ಲಿ 'ದಾಸೋಹ'ವನ್ನು ಮಾಡುತ್ತಾ ಬಂದವು. ಅಲ್ಲದೆ ಸಾಮಾಜಿಕ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡು ಸತ್ಯ, ಶ್ರದ್ಧೆ, ಪ್ರಾಮಾಣಿಕತೆಯ ತಳಹದಿಯ ಮೇಲೆ ಸಮಾಜದ ಸರ್ವತೋಮುಖ ಅಭಿವೃದ್ಧಿಗೆ ಮಾರ್ಗದರ್ಶನ ನೀಡುತ್ತಾ ಬಂದವು. ಮಠಗಳು ಮಾಡುವ ಸಾಮಾಜಿಕ ಸೇವೆಗೆ ಬೆಂಬಲ ನೀಡಲು ತಮ್ಮ ಶಕ್ತ್ಯಾನುಸಾರ ಸುಗ್ಗಿಯ ಕಾಲದಲ್ಲಿ ತಾವು ಬೆವರು ಸುರಿಸಿ ಬೆಳೆದ ದವಸ-ಧಾನ್ಯಗಳನ್ನು ನೀಡುವುದರ ಮೂಲಕ ನೈತಿಕ ಬೆಂಬಲವನ್ನು ವ್ಯಕ್ತಪಡಿಸುತ್ತಿದ್ದರು. ಅದಕ್ಕಾಗಿ ಅವರು ಸುಗ್ಗಿಯ ಕಾಲದಲ್ಲಿ ಕಣದಲ್ಲೆ ರಾಶಿಯ ಒಂದಿಷ್ಟು ಭಾಗವನ್ನು ಇಂತಹ ಮಠಗಳಿಗೆಂದು ಮೀಸಲಾಗಿಡುತ್ತಿದ್ದರು. ಹಾಗೆ ಮಾಡಿದರೆ ಅವರಿಗೆ ಸಂತೋಷ ನೆಮ್ಮದಿ. ತಾವು ಕಷ್ಟಪಟ್ಟು ದುಡಿದುದಕ್ಕೆ ಸಾರ್ಥಕವಾಯಿತು ಎಂಬ ಧನ್ಯತೆಯ ಭಾವನೆ. ಈ ಸಂಪ್ರದಾಯ ಈಗಲೂ ಮುಂದುವರಿದುಕೊಂಡು ಬಂದಿದೆ. ಮಠಗಳಿಗೆ, ಜಂಗಮರಿಗೆ ಮುಡುಪು ತೆಗೆದಿಟ್ಟರೆ ಕಣದ ಕೆಲಸಗಳು ಸುಸೂತ್ರವಾಗಿ ನಡೆಯುತ್ತವೆ, ರಾಶಿ ಹೆಚ್ಚಾಗುತ್ತದೆ ಎಂಬ ಅಚಲವಾದ ನಂಬಿಕೆ.

*ರಾಸಿಗಾಳಿಯು ಬೀಸಿ, ಸೂಸಿಹರಿಯಿತು ಕಣವು*
*ಕೂಪ ಕೋಲೂರ ಕಡೆಗಾಳಿ – ಬೀಸಿಂದು*
*ಮೀಸಲೀ ರಾಶಿ ಜಂಗಮಕೆ.*

*ಹಿಂಗಾರಿ ಬೆಳೆಗಾಗಿ, ಮುಂಗಡವೆ ಬೆಳೆಬಂದು*
*ಟೆಂಗ ಬಿಳಿಜೋಳ ಒಕ್ಕುವುದು – ಬೆಳವಲವು*
*ಜಂಗಮಗೆ ಎಡೆಯು ಹೊಸ ಬೆಳಸು.*

ಜನಪದರಿಗೂ, ಜಂಗಮರಿಗೂ ಒಂದು ರೀತಿಯ ಅವಿನಾಭಾವ ಸಂಬಂಧ. ಸಮಾಜದ ಮಧ್ಯೆ ವಾಸಿಸುತ್ತಿದ್ದ ಜಂಗಮರು ಗ್ರಾಮೀಣರಿಗೆ ಆದರ್ಶಗಳನ್ನು ಬಿತ್ತುವ, ಉತ್ತಮ ದಾರಿ ತೋರಿಸಿ ಸನ್ಮಾರ್ಗದಲ್ಲಿ ಮುನ್ನಡೆಯುವಂತೆ ಮಾಡುವ ಅವರ ಮನೆಯಲ್ಲಿ ನಡೆಯುವ ಮಂಗಳ-ಅಮಂಗಳ ಕಾರ್ಯಗಳಲ್ಲಿ ಭಾಗಿಯಾಗಿ ಮಾರ್ಗದರ್ಶನ ನೀಡುವವರು





ಗುರು. ಹೀಗಾಗಿ ನಮ್ಮ ಗ್ರಾಮೀಣರಿಗೆ ಜಂಗಮರನ್ನು ಕಂಡರೆ ಪ್ರೀತಿ, ಗೌರವ, ಭಕ್ತಿ. ಅವರಿಂದ ಉಪಕೃತರಾಗುವ ಗ್ರಾಮೀಣರು ಸುಗ್ಗಿಯ ಕಾಲದಲ್ಲಿ ತಮ್ಮಿಂದ ಸಾಧ್ಯವಾದಷ್ಟು ತಾವು ಬೆಳೆದ ಬೆಳೆಯನ್ನು ದಾಸೋಹದ ರೂಪದಲ್ಲಿ ಕಾಣಿಕೆಯಾಗಿ ನೀಡಿ ಕೃತಜ್ಞತೆಯನ್ನು ಸಲ್ಲಿಸುತ್ತಾರೆ.

ಹಿಂದೆ ರೈತರು ತಾವು ಬೆಳೆಯುತ್ತಿದ್ದ, ಅದು ಧಾನ್ಯವಾಗಿರಬಹುದು. ಹಣ್ಣಾಗಿರಬಹುದು, ತರಕಾರಿಯಾಗಿರಬಹುದು, ತೆಂಗು, ಮಾವು, ಬಾಳೆ ಏನೇ ಆಗಿರಬಹುದು. ಮೊದಲ ಬೀಡನ್ನು ತಮಗೆ ಸಮೀಪದಲ್ಲಿದ್ದ ಮಠಗಳಿಗೆ, ಜಂಗಮರಿಗೆ ಭಕ್ತಿಯಿಂದ ಅರ್ಪಿಸುತ್ತಿದ್ದರು. ಅವರು ಆಚರಿಸಿಕೊಂಡು ಬಂದಿರುವ ಸಂಪ್ರದಾಯವು ಮೊದಲಿನಷ್ಟು ವ್ಯಾಪಕವಾಗಿಲ್ಲದೇ ಹೋದರೂ, ಈಗಲೂ ಅಲ್ಲಲ್ಲಿ ಕಾಣಬಹುದಾಗಿದೆ.

ನಾಡಿನ ಸಾಮಾಜಿಕ, ಧಾರ್ಮಿಕ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ಅನುಪಮ ಸೇವೆ ಸಲ್ಲಿಸುವುದರ ಮೂಲಕ ಬಡವರು, ಹಿಂದುಳಿದವರು ಹಾಗೂ ದೀನದಲಿತರ ಪಾಲಿಗೆ ಆಶಾಜ್ಯೋತಿಯಾಗಿ ರಾಷ್ಟ್ರದ ಗಮನವನ್ನು ಸೆಳೆದಿರುವ ಶ್ರೀ ಸಿದ್ಧಗಂಗಾ ಮಠದ ಸಮೀಪದಲ್ಲಿಯೇ ನಮ್ಮ ಊರಿದೆ. ನಾನು ಚಿಕ್ಕವನಾಗಿದ್ದಾಗ ಊರಿನ ಕೆಲವು ಮುಖಂಡರು, ಅಭಿಮಾನಿಗಳು ಸೇರಿ. ಸುಗ್ಗಿಯ ಕಾಲದಲ್ಲಿ ರೈತರು ಮುಡುಪಾಗಿ ತೆಗೆದಿಟ್ಟ ದವಸ ಧಾನ್ಯಗಳು, ಹುಣಿಸೆ ಹಣ್ಣು, ಕುಂಬಳಕಾಯಿ, ಬೆಲ್ಲ ಮೊದಲಾದವುಗಳನ್ನು ಸಂಗ್ರಹಿಸಿ ಎತ್ತಿನ ಗಾಡಿಯಲ್ಲಿ ತೆಗೆದುಕೊಂಡು ಹೋಗಿ ಮಠಕ್ಕೆ ಅರ್ಪಿಸಿ ಪ್ರಸಾದ ಸ್ವೀಕರಿಸಿ ಬರುತ್ತಿದ್ದುದನ್ನು ಕಂಡಿದ್ದೇನೆ. ಎಷ್ಟೋ ಸಲ ಖುಷಿಗಾಗಿ ಎತ್ತಿನ ಗಾಡಿಯ ಮೇಲೆ ಕುಳಿತು. ಹೋಗಿ ಬಂದಿದ್ದೇನೆ. ಈ ದಾಸೋಹದ ಮಹತ್ವ ಕಾರ್ಯದಲ್ಲಿ ಎಲ್ಲರೂ ಜಾತಿ ಭೇದವಿಲ್ಲದೆ ಸಂತೋಷದಿಂದ ಭಾಗವಹಿಸುತ್ತಿದ್ದರು. ತಾವು ಬೆಳೆಯುತ್ತಿದ್ದ ಮೊದಲ ಬೀಡನ್ನು (ಬೆಳೆಯನ್ನು) ಮಠಕ್ಕೆ ಸಲ್ಲಿಸಬೇಕೆಂಬ ಬಯಕೆ ಅವರಲ್ಲಿ ಎಷ್ಟರ ಮಟ್ಟಿಗೆ ತೀವ್ರವಾಗಿತ್ತೆಂದರೆ ಮುಡುಪಾಗಿಟ್ಟ ಪದಾರ್ಥವನ್ನು ಯಾವುದೇ ಕಾರಣಕ್ಕೂ ವೈಯುಕ್ತಿಕವಾಗಲಿ ಅಥವಾ ಬೇರೆ ಕಾರಣಗಳಿಗಾಗಲಿ ಎಂಥ ಪರಿಸ್ಥಿತಿ ಬಂದರೂ ಬಳಸುತ್ತಿರಲಿಲ್ಲ. ದೇವರಿಗೆ ಮೀಸಲಿಟ್ಟ ಮುಡುಪು ಎಂಜಲಾಗಬಾರದೆಂಬ ಎಚ್ಚರಿಕೆ ಅವರಲ್ಲಿ ಸದಾ ಜಾಗೃತವಾಗಿರುತಿತ್ತು. ಹೀಗೆ ಮುಡುಪಾಗಿಟ್ಟ ಧಾನ್ಯಗಳಲ್ಲಿ ದೇವರನ್ನು ಕಾಣುತ್ತಿದ್ದರು. ಈ ಪದಾರ್ಥಗಳ ಬಗ್ಗೆ ಅವರು ಅಷ್ಟೊಂದು ಪ್ರೀತಿ, ಭಕ್ತಿ ಗೌರವವನ್ನಿಟ್ಟುಕೊಂಡಿದ್ದರು.

ಈಗ ಸಂಪ್ರದಾಯದಲ್ಲಿ ಸ್ವಲ್ಪ ಬದಲಾವಣೆಯಾಗಿದೆ. ಈಗ ಸಂಪ್ರದಾಯದಲ್ಲಿ ನಡೆಯುತ್ತಿದ್ದ ಸಾಮೂಹಿಕ ಹಳ್ಳಿಗಳಲ್ಲಿ ಮಠಗಳಿಗೆಂದು ಕೊಡಲು ನಡೆಯುತ್ತಿದ್ದ ಸಾಮೂಹಿಕ ಸಂಗ್ರಹ ಕಡಿಮೆಯಾಗಿದೆ. ಹಳ್ಳಿಹಳ್ಳಿಗಳಲ್ಲಿ ರಾಜಕೀಯದ ಬಿರುಗಾಳಿ ಬೀಸತೊಡಗಿ ಸದುದ್ದೇಶದಿಂದ ಸಮಾಜ ಸೇವೆ ಮಾಡುವವರ ಮೇಲೆ ವಿನಾಕಾರಣ ಅನುಮಾನ, ಆರೋಪ ಮಾಡುತ್ತಿರುವುದರಿಂದ ಸಾಮಾಜಿಕ ಸೇವೆಯಲ್ಲಿ ನಿರತರಾಗಿದ್ದವರು ಈ ಕೀಳು ರಾಜಕೀಯದಿಂದ ಬೇಸತ್ತು ಹಿಂದೆ ಸರಿಯುತ್ತಿದ್ದಾರೆ. ಹೀಗಾಗಿ ಚಿಕ್ಕಂದಿನಲ್ಲಿ ನಾನು ಕಾಣುತ್ತಿದ್ದ ಉತ್ಸಾಹ ತಣ್ಣಗಾಗಿದ್ದರೂ ರೈತರು ವೈಯಕ್ತಿಕವಾಗಿ ತಾವು ಮೊದಲಿನಿಂದಲೂ ಪಾಲಿಸಿಕೊಂಡ ಬಂದ ಸತ್‌ಸಂಪ್ರದಾಯವನ್ನು ಮುಂದುವರಿಸಿ ಕೊಂಡು ಬರುತ್ತಿರುವುದು ಸಂತೋಷದ ಸಂಗತಿ.

ಕಾಯಕ ಮತ್ತು ದಾಸೋಹವನ್ನು ಕುರಿತಂತೆ ಅನೇಕ ಜನಪದ ತ್ರಿಪದಿಗಳು ನಮಗೆ ದೊರೆಯುತ್ತಿದೆ.

*ನಿನ್ನ ಹೆಸರಿಲೆ ಹಂತಿ, ಹೊನ್ನು ಮುತ್ತಿನ ರಾಶಿ*
*ಹಣ್ಣಾದ ಮನಸಿನೊಕ್ಕಲಿಗ – ಒಕ್ಕುವನು*
*ತನ್ನ ಶಿವಭಕ್ತಿ ದಾಸೋಹ.*

*ಚಿಕ್ಕ ಮಾದನ ಹಾಡು, ಉಕ್ಕಿಸಿತು ತನಿರಾಶಿ*
*ಒಕ್ಕುದಕೆ ಸೋತು ಒಕ್ಕಲಿಗ – ಜಂಗಮಕೆ*
*ತಕ್ಕೆ ತಕ್ಕೆಯಲಿ ಉಡಿತುಂಬಿ.*

ರೈತರ ಮುಗ್ಧ ಭಕ್ತಿಗೆ ಶಿವ ಮೆಚ್ಚಿ ತೆನೆರಾಶಿ ಹೆಚ್ಚುವಂತೆ ಕರುಣಿಸುತ್ತಾನೆ. ಇದರಿಂದ ಸಂತಸಗೊಂಡ ರೈತ ಕಣಕ್ಕೆ ಬಂದ ಜೋಗಿ-ಜಂಗಮರಿಗೆ, ಬಡವರಿಗೆ ಬೆಳೆಯನ್ನು ತಕ್ಕೆ ತುಂಬ ತಬ್ಬಿ ದಾನ ಮಾಡುತ್ತಾನೆ. ಈ ದಾನ ಬೇರೊಬ್ಬರನ್ನು ಮೆಚ್ಚಿಸುವುದಕ್ಕೆ ಅಲ್ಲ; ಅವರ ಹೃದಯಾಂತರಾಳದಿಂದ ಮೂಡಿ ಬಂದ ಸದ್ಭಾವನೆ. ಸ್ವಾರ್ಥರಹಿತವಾದ ಕೊಡುವಿಕೆಯಲ್ಲಿ ಅವರಿಗೆ ಎಲ್ಲಿಲ್ಲದ ತೃಪ್ತಿ. ಶಿವ ಕೊಟ್ಟಿದ್ದನ್ನು ಶಿವನಿಗೇ ಅರ್ಪಿಸುವ ದಾರ್ಶನಿಕ ಭಾವನೆ!

ಶರಣರ ಆದರ್ಶ ಜೀವನ ಜನಪದರ ಮೇಲೆ ದಟ್ಟವಾಗಿ ಪ್ರಭಾವ ಬೀರಿದೆ. ಅವರ ಕಾಯಕದ ಬದುಕು ಇವರಿಗೆ ಆದರ್ಶವಾಗಿದೆ. ತಮ್ಮ ಉಸಿರಿರುವ ತನಕ ಕಾಯಕ-ದಾಸೋಹಗಳನ್ನು ತಮ್ಮ ಎರಡು ಕಣ್ಣುಗಳಂತೆ ಜೋಪಾನವಾಗಿಟ್ಟು ಕೊಂಡವರು. ಕಾಯಕ-ದಾಸೋಹವಿಲ್ಲದ ಬದುಕು ಬದುಕೇ ಅಲ್ಲ ಎಂದು ನಂಬಿದವರು.

*ಮಣ್ಣಿನೀ ಕಾಯವಿದು ಮಣ್ಣಾಗಿ ಹೋಗುವುದು*
*ಸಣ್ಣಾಗಿ ಸವಿಸಿ ಜಂಗಮಕೆ – ದಾಸೋಹ*
*ಕಣ್ಣೊಂದೆ ಸಾಕು ಕಾಯಕಕೆ.*

*ಬೇಡನಗೆ ಕೈಲಾಸ, ನೀಡನಗೆ ಶಿವಭಕ್ತಿ*
*ಮಾಡುವೆನು ಸೇವೆ ಶಿವಮಠಕೆ – ಶರಣರಿಗೆ*
*ನಾಡ ಕಾಯಕವೆ ಕೈಲಾಸ.*

ಕೈಲಾಸಕ್ಕಿಂತಲೂ ಕಾಯಕ ಶ್ರೇಷ್ಠ ಎಂಬ ಭಾವನೆಯನ್ನು ವ್ಯಕ್ತಪಡಿಸಿ ಕಾಯಕಕ್ಕೆ ತಮ್ಮದೇ ಆದ ದಾರ್ಶನಿಕತೆಯನ್ನು ತಂದುಕೊಟ್ಟಿದ್ದಾರೆ.

ಸೂರ್ಯನ ಉರಿಬಿಸಿಲಿಗೆ ಮೈಯೊಡ್ಡಿ ಬೆವರಿನ ಸ್ನಾನ ಮಾಡಿ ದುಡಿದ ದುಡಿಮೆಯ ಫಲವನ್ನು ತಾನು, ತನ್ನ ಸಂಸಾರ ಅನುಭವಿಸಿದರೆ ಸಾಲದು, ಜಂಗಮರು, ಬಡವರು, ಬುದ್ಧಿವಂತರಾಗಲಿ, ಆಲೋಚನೆ ಮಾಡುವ ಶಕ್ತಿಯನ್ನು ಹೊಂದಿರುವ ಮನುಷ್ಯರಾಗಲಿ ತಮ್ಮ ತಮ್ಮ ಕಾಯಕವನ್ನು ಮಾಡದಿದ್ದರೆ ಹೇಗೆ! ಅದು ಅವರ ಕರ್ತವ್ಯವೂ ಕೂಡ. ಅವರು ತಮ್ಮ ಕಾಯಕವನ್ನು ಮಾಡದಿದ್ದರೆ ಪ್ರಾಣಿ ಪಕ್ಷಿಗಳಿಗಿಂತ ಕೀಳು ಎಂಬುದನ್ನು ಮಾರ್ಮಿಕವಾಗಿ ನುಡಿದಿದ್ದಾರೆ.

ಸುಗ್ಗಿಯ ಕಾಲ ರೈತರಿಗೆ ಹರ್ಷದ ಹೊನಲನ್ನು ಹರಿಸುವ ಒಂದು ಸುಸಂದರ್ಭ. ಹೊಲದಲ್ಲಿ ಹಿಡಿಯಾಗಿ ಬಿತ್ತಿದ ಕಾಳು. ಮೊಳಕೆಯೊಡೆದು ತೆನೆತುಂಬಿ ಕಣದಲ್ಲಿ ರಾಶಿಯಾಗಿರುವುದನ್ನು ಕಂಡಾಗ ಅವರಿಗೆ ಆಗುವ ಸಂತೋಷ – ಸಂಭ್ರಮ ಹೇಳತೀರದು. ಅದು ಅವರ ದುಡಿಮೆಯ ಫಲ. ಸತ್ಯ ಶುದ್ಧ ಕಾಯಕಕ್ಕೆ ಸಂದ ಪ್ರತಿಫಲ. ಜನಪದರ ದೃಷ್ಟಿಯಲ್ಲಿ ಹೊಲದ ಸುಗ್ಗಿ :

*ನೂರೊಂದು ಶರಣರು, ನೂರೊಂದು ಬಂಟಾರು*
*ಸಾರಿ ಹೇಳ್ಯಾನೋ ಒಕ್ಕಲಿಗೊ – ಹೊಲಸುಗ್ಗಿ*
*ಧೀರ ಕಾಯಕದ ದಿನವೆಂದು.*

ಬಿಸಿಲು ಮಳೆಯೆನ್ನದೆ ಹೊಲದಲ್ಲಿ ಬೆವರು ಸುರಿಸುವ ರೈತನ ಒಂದೊಂದು ಬೆವರಿನ ಹನಿಯೂ ಸಹಸ್ರ ಸಹಸ್ರ ಕಾಳುಗಳಾಗಿ ಕಣವನ್ನು ಸೇರಿ ಅಳೆತ್ತರದ ರಾಶಿಯಾದಾಗ ರೈತರಿಗಾಗುವ ಆನಂದ ವರ್ಣನಾತೀತ. ಅವನಿಗೆ ಅವು ಬರೀ ಕಾಳುಗಳಲ್ಲ, ಸ್ವಾತಿಯ ಮುತ್ತುಗಳು. ಹೀಗೆ ಬೆವರು ಹರಿಸಿ ಬೆಳೆದುದೆಲ್ಲವೂ ತನಗೇ ಸೇರಬೇಕೆಂಬ ಆಸೆ ಅವನಿಗಿಲ್ಲ. ತಾನು ಕಾಯಕದಿಂದ ಗಳಿಸಿದ ಫಲದಲ್ಲಿ ಸ್ವಲ್ಪ ಭಾಗವನ್ನಾದರೂ ಸಮಾಜಕ್ಕೆ ಸದ್ವಿನಿಯೋಗಿಸಬೇಕೆನ್ನುವ ಅವನ ಮನದ ತುಡಿತ ಅವನಲ್ಲಿ ಮನೆ ಮಾಡಿಕೊಂಡಿರುವ ಉದಾತ್ತವಾದ ಗುಣದ ದ್ಯೋತಕ. ಅವರಲ್ಲಿ ದಾಸೋಹ ಮಾಡುವ ಗುಣ ರಕ್ತಗತವಾಗಿ ಹರಿದು ಬಂದಿದೆ. ಸುಗ್ಗಿಕಾಲದ ಬಣ್ಣನೆಯನ್ನು ಜನಪದರ ಬಾಯಿಂದಲೇ ಕೇಳಬೇಕು.

*ಮೂರು ಸಂಜೆ ಹೊತ್ತು, ಮುತ್ತೈದಿ ಬಂದಾಳ*
*ಆರತಿ ಬೆಳಗಿ ಬಲಗೈಯ್ಯೋ – ಬಿತ್ತಿದರೆ*
*ನಾಡೆಲ್ಲ ಬೆಳಸು ಹುಲುಸಾಗಿ.*

ಎಂತಹ ಸೊಗಸಾದ ವರ್ಣನೆ! ಸಾಮಾನ್ಯವಾಗಿ ಸಂಜೆ ಹೊತ್ತು ಕಣದಲ್ಲಿ ರಾಶಿಯನ್ನು ತೂರುವುದು ರೂಢಿ. ಕಾರಣ ಸಂಜೆ ತಂಗಾಳಿ ಬೀಸುತ್ತದೆ. ಆ ತಂಗಾಳಿಯಲ್ಲಿ ಕಾಳನ್ನು ತೂರಿ ಹಸನು ಮಾಡುತ್ತಾರೆ. ಹಾಗೆ ಮಾಡುವಾಗ ಜೊಳ್ಳೆಲ್ಲಾ ಗಾಳಿಗೆ ತೂರಿ ಹೋಗಿ ಗಟ್ಟಿಯಾದ ಕಾಳು ಒಂದೆಡೆ ರಾಶಿಯಾಗಿ ಬೀಳುತ್ತದೆ. ಆ ಕಾಳುಗಳು ಅವರ ಕಣ್ಣಿಗೆ ಮುತ್ತಾಗಿ ಕಂಡಿದೆ. ಅಷ್ಟೇ ಅಲ್ಲ;

*ಕುಣಿಕುಣಿದು ಚೌಡಯ್ಯ ಮಣಿಮಣಿದು ಹಾಡಿದರೆ*
*ಕಣ ತುಂಬಿ ರಾಶಿ ಹೊರಸೂಸಿ – ಒಕ್ಕಲಿಗ*
*ಮಣಿದು ದಾಸೋಹ ಹೊಸಮತಕೆ.*

ದೀನ-ದಲಿತರೂ ಸ್ವಲ್ಪ ಭಾಗವನ್ನು ಬಳಸುವಂತಾಗಬೇಕು ಎಂಬ ಭಾವನೆಗೆ ಪ್ರೇರಣೆ, ಪ್ರಭಾವ ಬೀರಿದ್ದು ಬಸವಾದಿ ಶರಣರಿಂದ.

ವಿಶ್ವಭ್ರಾತೃತ್ವ ಹಾಗೂ ಸಮಾನತೆಯ ನೆಲಗಟ್ಟಿನಲ್ಲಿ ರೂಪುಗೊಂಡ ಕಾಯಕ ಮತ್ತು ದಾಸೋಹ ಪರಿಕಲ್ಪನೆ ಶರಣರು ವಿಶ್ವಕ್ಕೆ ನೀಡಿದ ಅಮೂಲ್ಯ ಕೊಡುಗೆ. ಉನ್ನತವಾದ ಧ್ಯೇಯಾದರ್ಶಗಳಿಂದ ಕೂಡಿದ ಕಾಣಿಕೆಯನ್ನು ನೀಡುವುದರ ಮೂಲಕ ಕರ್ನಾಟಕದ ಕೀರ್ತಿಯನ್ನು ವಿಶ್ವಮಟ್ಟಕ್ಕೇರಿಸಿದ ಹಿರಿಮೆ ಸಮಸ್ತ ಶರಣರಿಗೆ ಸಲ್ಲುತ್ತದೆ. ಆದರೆ ನಮ್ಮ ಜನಪದರ ದೃಷ್ಟಿಯಲ್ಲಿ ಬಸವಣ್ಣ ಕಾಯಕ ಮತ್ತು ದಾಸೋಹ ಸಿದ್ಧಾಂತಗಳ ಸೃಷ್ಟಿಕರ್ತ. ಅವನು ಅವರ ಪಾಲಿಗೆ ಮಂಗಳ ಮೂರ್ತಿ. ಬಸವಣ್ಣನನ್ನು ಕುರಿತು ಮನದುಂಬಿ ಹಾಡುವುದೆಂದರೆ ಅವರಿಗೆ ಪರಮಾನಂದ.

*ಕಾಯಕವ ಕಲಿಸುದಕ ನಾಯಕನು ಬಸವಯ್ಯ*
*ಜೀಯ ಹೊಸ ಮತಕೆ ಶಿವಭಕ್ತಿ - ಸಾರುದಕೆ*
*ರಾಯ ಜೀವನದ ಹೊಸ ನುಡಿಗೆ.*

*ದಾಸೋಹಿ ಬಸವಣ್ಣ ದಾಸೋಹ ಕಲಿಸಿದನು*
*ದೇಶ ದೇಶೆಲ್ಲ ಕೇಳುತಲಿ - ಹೊಸಮಾತ*
*ಮಾಸಿದವು ವೇದ ಹುಸಿಯೆಂದು.*

*ಅರ್ಪಣೆಯ ಅನುಭಾವ ಹೆಪ್ಪುಗಟ್ಟಿತು ಲೋಕ*
*ಬೆಪ್ಪಾತು ನಾಕ ಕಾಯಕದ - ಹಾಲ್ಗೊಳೆಯ*
*ತೆಪ್ಪ ದಾಸೋಹ ತೇಲುತಲಿ*

ಎಂಥ ಅದ್ಭುತವಾದ ಕಲ್ಪನೆ! ಕಾಯಕದ ಹಾಲಿನ ಹೊಳೆಯಲ್ಲಿ ದಾಸೋಹವೆಂಬ ತೆಪ್ಪ ತೇಲಿತು ಎನ್ನುವಲ್ಲಿ ಅವರ ಅನುಭಾವದೆತ್ತರಕ್ಕೇರಿದ ಭಾವನೆ ಅಚ್ಚರಿ ಪಡುವಂತಹುದು.

ಜನಪದರು ಕಾಯಕದ ದೈನಂದಿನ ಬದುಕನ್ನು ಆಧ್ಯಾತ್ಮಿಕ ಬಾಳಿಗೂ ಸಮನ್ವಯ ಮಾಡಿ ಕಾಯಕ ದೃಷ್ಟಿಗೆ ದೈವಿಕತೆಯನ್ನು, ಲಿಂಗತೇಜವನ್ನು ತಂದುಕೊಟ್ಟು ಶರಣ ಚೇತನವಾದ ಬಗೆ ಇದಾಗಿದೆ.

*

**ಶ್ರೀವಾಣಿ**

ಕಾರ್ಯಕ-ದಾಸೋಹಗಳು ಶರಣರು ಜಗತ್ತಿಗೆ ನೀಡಿದ ಸರ್ವಕಾಲಿಕ ತಾರಕ ಮಂತ್ರಗಳು. ಕಾಯಕ ವ್ಯಕ್ತಿಯ ಏಳ್ಗೆಯನ್ನು, ಸಮಾಜದ ಕಲ್ಯಾಣವನ್ನು ಮತ್ತು ಆತ್ಮ ವಿಕಾಸವನ್ನು ಪ್ರದಾನಿಸುವ ಅಮೂಲ್ಯ ತತ್ತ್ವ. ದೇಹ ಮನಸ್ಸುಗಳನ್ನು ಪವಿತ್ರ ಮಾಡುವ ಶುದ್ಧ ಸಂಜೀವಿನಿ. ಮನಸ್ಸಿನ ಏಕಾಗ್ರತೆ ಕಾಯಕ ರಾಜಮಾರ್ಗ. ದಾಸೋಹ ಸಮಾಜಾಭಿವೃದ್ಧಿಗೆ ತೆರೆದುಕೊಂಡ 'ಶಿವಪಥ', ದಾಸೋಹದಲ್ಲಿ ಆತ್ಮ ಕಲ್ಯಾಣವಿದೆ, ಜಂಗಮಶೀಲವಾದ ಸಮಾಜದ ಉತ್ಥಾನವಿದೆ. ಶರಣರು 'ಕಾಯಕವೇ ಕೈಲಾಸ'ವೆಂದರು.

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಸದಸ್ಯರಾಗಿರುವುದು ಸಂತೋಷ. ಇದರಿಂದ **'ಸಿದ್ಧಗಂಗಾ'** ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಕಾಗದ, ಮುದ್ರಣ, ಅಂಚೆ ವೆಚ್ಚ ಇನ್ನಿತರ ವೆಚ್ಚಗಳು ದುಬಾರಿಯಾಗಿದ್ದು, ಪತ್ರಿಕೆ ಮುನ್ನಡೆಸಲು ಕಷ್ಟವಾಗುತ್ತದೆ ಎಂಬುದನ್ನು ತಮ್ಮ ಗಮನಕ್ಕೆ ತರುತ್ತಲೇ ಬರುತ್ತಿದ್ದೇವೆ.

ಪ್ರಾರಂಭಕ್ಕೆ ೫೦೦/- ರೂ, ೧೦೦೦/-ರೂ ಆಜೀವ ಸದಸ್ಯರಾಗಲು ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಹಣ ಕೇವಲ ೫೦/- ರೂ, ೧೦೦/- ಮಾತ್ರ. ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಮುದ್ರಣ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಕೊರತೆಯನ್ನು ದಯವಿಟ್ಟು ಅರ್ಥಮಾಡಿಕೊಳ್ಳುವಿರೆಂದು ಭಾವಿಸಿದ್ದೇವೆ.

**ಪ್ರಸ್ತುತ ಆಜೀವ ಚಂದಾ ೨೦೧೪ ವರ್ಷದಿಂದ ೧೫೦೦/- ರೂ ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ ಸಂದಾಯ ಮಾಡಿರುವವರು ಬಾಕಿ ೧೦೦೦/- ರೂ ಸಂದಾಯ ಮಾಡಬೇಕು. ೧೦೦೦/- ರೂ ಸಂದಾಯ ಮಾಡಿರುವವರು ಬಾಕಿ ೫೦೦/- ಸಂದಾಯ ಮಾಡಲು ಕೋರಿದೆ.**

ದಯಮಾಡಿ ತಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತವನ್ನು ಸಿದ್ಧಗಂಗಾ **ಮಾಸಪತ್ರಿಕೆ** ಹೆಸರಿನಲ್ಲಿ **ನಗದು/ ಚೆಕ್/ಡಿ.ಡಿ.** ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ (LM) ಸಂಖ್ಯೆ ನಮೂದಿಸಿ ದೂರವಾಣಿ/ಮೊಬೈಲ್ ನಂಬರ್ ನೊಂದಿಗೆ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ ಕೊಡುವುದರ ಮೂಲಕ **'ಸಿದ್ಧಗಂಗಾ'** ಮುನ್ನಡೆಗೆ ಸಹಕರಿಸಬೇಕಾಗಿ ಕಳಕಳಿಯಿಂದ ಪ್ರಾರ್ಥಿಸುತ್ತೇವೆ. ವಿಳಾಸ ಬದಲಾವಣೆಯಾಗಿದ್ದರೆ ದಯವಿಟ್ಟು ಬದಲಾದ ವಿಳಾಸವನ್ನು ತಮ್ಮ (LM) ಸಂಖ್ಯೆಯೊಂದಿಗೆ ಕಳುಹಿಸಿಕೊಟ್ಟರೆ ಪತ್ರಿಕೆ ತಮಗೆ ತಲುಪಲು ಅನುಕೂಲವಾಗುತ್ತದೆ.

**ಪ್ರಕಾಶಕರು,** 'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪.
ದೂರವಾಣಿ : 0816-2282322





## ಶ್ರೀಮಠದಲ್ಲಿ ೧೧೦ನೇ ಸಂಸ್ಕೃತೋತ್ಸವ

ಶ್ರೀ ಸಿದ್ಧಲಿಂಗೇಶ್ವರ ವೇದ-ಸಂಸ್ಕೃತ ಸ್ನಾತಕ-ಸ್ನಾತಕೋತ್ತರ ಅಧ್ಯಯನ ಕೇಂದ್ರ, ಶ್ರೀ ಉದ್ಧಾನೇಶ್ವರ ವೇದ-ಸಂಸ್ಕೃತ ಪಾಠಶಾಲೆ ಮತ್ತು ಶ್ರೀ ಶಿವಕುಮಾರಸ್ವಾಮೀಜಿ ವೇದ-ಸಂಸ್ಕೃತ ಪಾಠಶಾಲೆ ಇವುಗಳ ಸಂಯುಕ್ತಾಶ್ರಯದಲ್ಲಿ ಫೆಬ್ರವರಿ ೨. ರಂದು ೧೧೦ನೇ ಸಂಸ್ಕೃತೋತ್ಸವವನ್ನು ಅತ್ಯಂತ ವಿಜೃಂಭಣೆ ಯಿಂದ ಆಚರಿಸಲಾಯಿತು.

ಇದರ ಅಂಗವಾಗಿ ಪ್ರಾತಃಕಾಲ ೦೬.೩೦ಕ್ಕೆ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಧ್ವಜಾರೋಹಣವನ್ನು ಮಾಡಿ ಸಂಸ್ಕೃತೋತ್ಸವಕ್ಕೆ ಚಾಲನೆ ನೀಡಿದರು. ನಂತರ ಶ್ರೀಕ್ಷೇತ್ರದ ಆಡಳಿತಾಧಿಕಾರಿಗಳಾದ ಶ್ರೀ ಎಸ್.ವಿಶ್ವನಾಥಯ್ಯನವರು ಸಂಸ್ಕೃತ-ಸಂಸ್ಕೃತಿ ವಸ್ತುಪ್ರದರ್ಶನವನ್ನು ಉದ್ಘಾಟಿಸಿದರೆ, ಸಂಸ್ಥೆಯ ವ್ಯವಸ್ಥಾಪಕರಾದ ಶ್ರೀ ಎಲ್.ಬಸವರಾಜು ರವರು ವಿದ್ಯಾರ್ಥಿಗಳ ಪಥಸಂಚಲನೆಗೆ ಚಾಲನೆ ನೀಡಿದರು. ನಂತರ ಶ್ರೀ ಕ್ಷೇತ್ರದಲ್ಲಿ ಸಂಸ್ಕೃತಾಭ್ಯಾಸವನ್ನು ಮಾಡುವ ಎಲ್ಲ ಮಕ್ಕಳು ಆಕರ್ಷಕ ಪಥಸಂಚಲನದಲ್ಲಿ ಭಾಗವಹಿಸಿ, ಸಂಸ್ಕೃತೋತ್ಸವಕ್ಕೆ ಮೆರಗನ್ನು ನೀಡಿದರು. ಪ್ರಾತಃ ೧೦.೦೦ ಗಂಟೆಗೆ ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಜ್ಯೋತಿ ಬೆಳಗಿಸುವುದರ ಮೂಲಕ ಶಾಸ್ತ್ರಾರ್ಥಗೋಷ್ಠಿಯನ್ನು ಉದ್ಘಾಟಿಸಿ, ಆಶೀರ್ವಚನವನ್ನು ನೀಡಿದರು. ಈ ಸಂದರ್ಭದಲ್ಲಿ ಅಲಂಕಾರಶಾಸ್ತ್ರದಲ್ಲಿ **'ಕಾವ್ಯ ಪ್ರಯೋಜನಮ್'** ಎಂಬ ವಿಷಯವನ್ನು ಕುರಿತು ಶ್ರೀ ಸಿದ್ಧಲಿಂಗೇಶ್ವರ ವೇದ-ಸಂಸ್ಕೃತ ಕಾಲೇಜಿನ ವಿಶ್ರಾಂತ ಅಲಂಕಾರಶಾಸ್ತ್ರದ ಪ್ರಾಧ್ಯಾಪಕರಾದ ವಿದ್ವಾನ್ ಶ್ರೀ ಕೆ.ಬಸವರಾಜುರವರು ವಿಷಯ ಮಂಡನೆ ಮಾಡಿದರು. ವ್ಯಾಕರಣಶಾಸ್ತ್ರದಲ್ಲಿ **'ಸರ್ವಶಾಸ್ತ್ರೋಪಕಾರಕಮ್ ವ್ಯಾಕರಣಶಾಸ್ತ್ರಮ್'** ಎಂಬ ವಿಷಯವನ್ನು ಕುರಿತು ಮೈಸೂರಿನ ದೀಕ್ಷಾ ಪಿ.ಯು.ಕಾಲೇಜಿನ ಉಪನ್ಯಾಸಕರಾದ ವಿದ್ವಾನ್ ಶ್ರೀ ಶ್ರೀನಿವಾಸರವರು ವಿಷಯ ಮಂಡನೆ ಮಾಡಿದರು. ನವೀನನ್ಯಾಯಶಾಸ್ತ್ರದಲ್ಲಿ **'ನ್ಯಾಯಶಾಸ್ತ್ರಸ್ಯ ಪರಿಚಯಃ'** ಎಂಬ ವಿಷಯದ ಬಗ್ಗೆ ಶ್ರೀ ಸಿದ್ಧಲಿಂಗೇಶ್ವರ ವೇದ-ಸಂಸ್ಕೃತ ಕಾಲೇಜಿನ ವಿಶ್ರಾಂತ ನವೀನನ್ಯಾಯಶಾಸ್ತ್ರದ ಸಹಾಯಕ ಪ್ರಾಧ್ಯಾಪಕರಾದ ವಿದ್ವಾನ್ ಶ್ರೀ ಬಿ.ರಾಮಚಂದ್ರರಾವ್ ರವರು ವಿಷಯ ಮಂಡನೆ ಮಾಡಿದರು. ಅಂತೆಯೇ ಶಕ್ತಿವಿಶಿಷ್ಟಾದ್ವೈತ ವೇದಾಂತಶಾಸ್ತ್ರದಲ್ಲಿ **'ಶಕ್ತಿವಿಶಿಷ್ಟಾದ್ವೈತದರ್ಶನಮ್'** ಎಂಬ ವಿಷಯದ ಬಗ್ಗೆ ಮೈಸೂರಿನ ಶ್ರೀ ಮನ್ಮಹಾರಾಜ ಸಂಸ್ಕೃತ ಕಾಲೇಜಿನ ಪ್ರಭಾರಿ ಪ್ರಾಂಶುಪಾಲರಾದ ವಿದ್ವಾನ್ ಡಾ. ಕೆ.ಎಂ. ಮಹದೇವಯ್ಯನವರು ವಿಷಯ ಮಂಡನೆ ಮಾಡಿದರು. ಶಾಸ್ತ್ರಾರ್ಥಗೋಷ್ಠಿಯ ಅಧ್ಯಕ್ಷತೆಯನ್ನು ಶ್ರೀ ಸಿದ್ಧಲಿಂಗೇಶ್ವರ ವೇದ-ಸಂಸ್ಕೃತ ಕಾಲೇಜಿನ ನಿವೃತ್ತ ಪ್ರಾಂಶುಪಾಲರಾದ ವಿದ್ವಾನ್ ಶ್ರೀ ಪಿ.ಎನ್. ಚಂದ್ರಶೇಖರಯ್ಯ ವಹಿಸಿದ್ದರು.

ಅಂದು ಸಂಜೆ ಪ್ರಾರ್ಥನಾ ಪ್ರಾಂಗಣದಲ್ಲಿ ನಡೆದ ಸಮಾರೋಪ ಸಮಾರಂಭದ ದಿವ್ಯ ಸಾನ್ನಿಧ್ಯವನ್ನು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ವಹಿಸಿದ್ದರು. ಉಪನ್ಯಾಸಕರಾಗಿ ಆಗಮಿಸಿದ್ದ ಕರ್ನಾಟಕ ಸಂಸ್ಕೃತ ಶಿಕ್ಷಣ ನಿರ್ದೇಶನಾಲಯದ ನಿರ್ದೇಶಕರಾದ ಡಾ. ವಿ. ಗಿರೀಶ್ಚಂದ್ರರವರು

ಮಾತನಾಡುತ್ತಾ 'ಈ ದಿನ ನಾನು ಶ್ರೀಕ್ಷೇತ್ರದಲ್ಲಿ ಎರಡು ದೇವರಗಳನ್ನು ನೋಡಿ ಆನಂದಭರಿತನಾದೆ, ಒಂದನೆ ದೇವರು ಶ್ರೀಕ್ಷೇತ್ರದ ಆರಾಧ್ಯ ದೈವ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ದರ್ಶನ. ಎರಡನೆ ದೇವರು ನಡೆದಾಡುವ ದೇವರೆಂದು ಕರೆಯಲ್ಪಡುವ ಶತಾಯುಷಿಗಳಾದ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು. ಸಂಸ್ಕೃತ, ಭಾರತೀಯ ಸಂಸ್ಕೃತಿಯನ್ನು ಬಿಂಬಿಸುವ ಪರಿಷ್ಕೃತ ಸಂಸ್ಕಾರಯುಕ್ತ ಭಾಷೆ, ಈ ಸಂಸ್ಕೃತ ಭಾಷೆಯನ್ನು ಮಠಗಳು ಆಂದೋಲನದ ಮೂಲಕ ಪ್ರಚಾರ ಮಾಡುವ ಹಾಗೂ ಸಂರಕ್ಷಿಸುವ ಹೊಣೆಯನ್ನು ಹೊರಬೇಕಾಗುತ್ತದೆ. ರಾಮಾಯಣದ ಪಾತ್ರಗಳನ್ನು ಸರಿಯಾಗಿ ಅರ್ಥೈಸಿಕೊಂಡಾಗ ನಮ್ಮಲ್ಲಿರುವ ದ್ವೇಷ-ಅಸೂಯೆ-ವೈಷಮ್ಯಗಳು ದೂರವಾಗುತ್ತವೆ ಎಂದು ಕರೆ ನೀಡಿದರು. ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ಮಾನ್ಯ ಕುಲಸಚಿವರಾದ ಶ್ರೀಮತಿ ಎಂ.ಶಿಲ್ಪಾರವರು ಶ್ರೀ ಸಿದ್ಧಲಿಂಗೇಶ್ವರ ವೇದ-ಸಂಸ್ಕೃತ ಸ್ನಾತಕ-ಸ್ನಾತಕೋತ್ತರ ಅಧ್ಯಯನ ಕೇಂದ್ರದ ವಿದ್ವನ್ಮಧ್ಯಮಾ ಹಾಗೂ ವಿದ್ವದುತ್ತಮಾ ತರಗತಿಗಳಲ್ಲಿ ಅತ್ಯುನ್ನತ ಶ್ರೇಣಿ (ಡಿಸ್ಟಿಂಕ್ಷನ್) ಪಡೆದ ವಿದ್ಯಾರ್ಥಿಗಳಿಗೆ ನಗದು ಪುರಸ್ಕಾರ ಹಾಗೂ ಸ್ಮರಣಿಕೆಯನ್ನು ನೀಡಿ ಗೌರವಿಸಿದರು. ನಂತರ ಅವರು ಮಾತನಾಡುತ್ತಾ ಸಂಸ್ಕೃತ ಭಾಷೆಯು ನಮ್ಮ ಸಂಸ್ಕೃತಿಯ ಪ್ರತೀಕ, ಇದು ಕೆಲವರಿಗೆ ಮಾತ್ರ ಸೀಮಿತವಾಗದೆ ಜನಸಾಮಾನ್ಯರು ಕಲಿಯುವಂತಾಗ ಬೇಕು. ಸಂಸ್ಕೃತ ನಮ್ಮ ದೇಹದ ಒಂದು ಅಂಗ ತಿಳಿದು ಅದನ್ನು ಬೆಳೆಸಬೇಕು ಎಂಬುದಾಗಿ ತಿಳಿಸಿದರು.

ಅಧ್ಯಕ್ಷತೆಯನ್ನ ವಹಿಸಿದ್ದ ತುಮಕೂರು ರಾಮಕೃಷ್ಣ ವಿವೇಕಾನಂದಾಶ್ರಮದ ಅಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸ್ವಾಮಿವೀರೇಶಾನಂದ ಸರಸ್ವತಿ ಸ್ವಾಮೀಜಿಯವರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ವಿಶ್ವದಲ್ಲಿ ಸಂಸ್ಕೃತ ಭಾಷೆಗೆ ಅಪಾರವಾದ ಗೌರವವಿದೆ, ಪಾಶ್ಚಾತ್ಯರೂ ಕೂಡ ಸಂಸ್ಕೃತ ಭಾಷೆಯನ್ನ ಗೌರವಿಸುತ್ತಾರೆ. ಯೂರೋಪಿಯನ್ನರು ಕೂಡ ಹಲವು ಭಾಷೆಗಳಿಗೆ ಸಂಸ್ಕೃತವೇ ತಾಯಿ ಭಾಷೆ ಎಂದು ಹೇಳಿದ್ದಾರೆ. ಜನಸಾಮಾನ್ಯರಿಗೂ ಕೂಡ ಸಂಸ್ಕೃತದಿಂದ ಆಧ್ಯಾತ್ಮದ ಪರಿಚಯವಾಗುತ್ತದೆ. ಜೀವನದ ಪರೀಕ್ಷೆಗೆ ಜ್ಞಾನ-ಶಕ್ತಿಬೇಕು. ನಿಮ್ಮ ಭವಿಷ್ಯ ರೂಪಿಸಿಕೊಳ್ಳಲು ಸಂಸ್ಕೃತಾಧ್ಯಯನ ಮಾಡಬೇಕೆಂದು ತಿಳಿಸಿದರು. ವಿದ್ಯೆಯಿಲ್ಲದವನು ಪಶುವಿಗೆ ಸಮಾನ ಸಂಸ್ಕೃತಾಧ್ಯಯನ ಪರಂಪರೆಯ ಪ್ರತೀಕ, ಸಂಸ್ಕೃತ ಜೀವನವನ್ನು ಕಟ್ಟಿಕೊಡುತ್ತದೆ. ಸಂಸ್ಕೃತಗಂಗೆ ಸಿದ್ಧಗಂಗೆಯಲ್ಲಿ ಶತಮಾನೋತ್ಸವವನ್ನು ಕಂಡಿದೆ. **ಯತಿಗಳಿಗೆ ಹಿಮಾಲಯದಂತೆ ಬಾನೆತ್ತರಕ್ಕೆ ಕಾಣುವ ಶತಾಯುಷಿಗಳಾದ ಪರಮಪೂಜ್ಯ ಶ್ರೀ ಶ್ರೀ ಸ್ವಾಮೀಜಿಯವರಿಗೆ ಅನಂತಾನಂತ ವಂದನೆಗಳನ್ನು ಸಮರ್ಪಿಸುತ್ತೇನೆ** ಎಂದು ಹೇಳಿದರು. ಅಂತೆಯೇ ಈ ಸಮಾರಂಭದಲ್ಲಿ ಶ್ರೀ ಸಿದ್ಧಲಿಂಗೇಶ್ವರ ವೇದ-ಸಂಸ್ಕೃತ ಕಾಲೇಜಿನ ಶಕ್ತಿವಿಶಿಷ್ಟಾದ್ವೈತ ವೇದಾಂತಶಾಸ್ತ್ರ ವಿಭಾಗದಲ್ಲಿ ಪ್ರಾಧ್ಯಾಪಕರಾಗಿ ನಿವೃತ್ತರಾದ ಪೂಜ್ಯ ಶ್ರೀ ಶಿವಲಿಂಗಸ್ವಾಮಿಗಳು ಹಾಗೂ ನ್ಯಾಯಶಾಸ್ತ್ರ ವಿಭಾಗದಲ್ಲಿ ಸಹಾಯಕಪ್ರಾಧ್ಯಾಪಕರಾಗಿ ನಿವೃತ್ತರಾದ ವಿದ್ವಾನ್ ಶ್ರೀ ಬಿ.ರಾಮಚಂದ್ರರಾವ್ ಅವರನ್ನು ಸನ್ಮಾನಿಸಲಾಯಿತು.

ಸಮಾರಂಭದ ಕೊನೆಯಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳವರು ತಮ್ಮ ಆಶೀರ್ವಚನದಲ್ಲಿ ಶ್ರೀ ಉದ್ದಾನಶಿವಯೋಗಿಗಳಿಂದ ಆರಂಭಗೊಂಡ ಸಂಸ್ಕೃತ ಪಾಠಶಾಲೆ ಸಾವಿರಾರು ವಿದ್ಯಾರ್ಥಿಗಳನ್ನು ನಾಡಿಗೆ ನೀಡಿದೆ. ಭಾರತೀಯ ಸಂಸ್ಕೃತಿಯನ್ನು ಬೆಳೆಸುವಲ್ಲಿ ಸಂಸ್ಕೃತದ ಪಾತ್ರ ಮಹತ್ತರವಾದದ್ದು. ಜ್ಞಾನಕ್ಕಾಗಿ ಭಾಷೆಯನ್ನು ಕಲಿಯುತ್ತೇವೆ ಎಂಬುದು ಎಲ್ಲರಲ್ಲೂ ಮೂಡಬೇಕು. ಗ್ರಾಮಫೋನಿಗೆ ಮೊದಲ ಮುದ್ರಣ ಭಾಷೆ ಸಂಸ್ಕೃತ. **'ಶತಶ್ಲೋಕೇನ ಪಂಡಿತಃ'** ಎಂಬ ಉಕ್ತಿಯಂತೆ ಇರುವ ಅವಕಾಶವನ್ನು ಸದುಪಯೋಗ ಪಡಿಸಿಕೊಂಡು ಜ್ಞಾನಮಟ್ಟವನ್ನು ಹೆಚ್ಚಿಸಿಕೊಳ್ಳುವ ಬಗ್ಗೆ ವಿದ್ಯಾರ್ಥಿಗಳು ಪ್ರಯತ್ನಶೀಲರಾಗಬೇಕು, ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ಪ್ರಪ್ರಥಮ ಕುಲಪತಿಗಳಾಗಿದ್ದ ಪ್ರೊ. ಮಲ್ಲೇಪುರಂ ಜಿ ವೆಂಕಟೇಶ್ ಇವರು ಅಧ್ಯಯನ ಮಾಡಿದ್ದು, ನಮ್ಮ ಈ ಸಂಸ್ಕೃತ ಪಾಠಶಾಲೆಯಲ್ಲಿ ಎಂಬುದು ಅತ್ಯಂತ ಹರ್ಷದಾಯಕವಾದ ವಿಷಯ ಎಂದು ತಿಳಿಸಿದರು.

ಕಾರ್ಯಕ್ರಮದಲ್ಲಿ ಸಂಸ್ಕೃತ ಕಾಲೇಜಿನ ಅಲಂಕಾರ ಶಾಸ್ತ್ರ ಪ್ರಾಧ್ಯಾಪಕರಾದ ಶ್ರೀ ಎಂ. ಶಾಂತಕುಮಾರ್ ರವರು ಸರ್ವರನ್ನು ಸ್ವಾಗತಿಸಿದರು, ಸಂಸ್ಕೃತ ಕಾಲೇಜಿನ ನ್ಯಾಯಶಾಸ್ತ್ರ ಪ್ರಾಧ್ಯಾಪಕರಾದ ಶ್ರೀ ಎಸ್.ಎಸ್. ನಿರಂಜನಮೂರ್ತಿ ಇವರು ಶರಣು ಸಮರ್ಪಣೆ ಮಾಡಿದರು. ಕಾರ್ಯಕ್ರಮದ ನಿರೂಪಣೆಯನ್ನು ಸಂಸ್ಕೃತ ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಜಿ.ಸಿ. ರಾಜಶೇಖರಯ್ಯನವರು ನೆರವೇರಿಸಿದರು.





# ಒಂದು ಮನವಿ

ಸಹೃದಯರೇ,

ನಮ್ಮ ಸಂಘವು ಸ್ಥಾಪನೆಯಾದಾಗಿನಿಂದ ಇದುವರೆಗೆ ಅನೇಕ ಯೋಜನೆಗಳನ್ನು ಹಮ್ಮಿಕೊಂಡು ತಮ್ಮ ಸಹಕಾರದಿಂದ ಕಾರ್ಯರೂಪಕ್ಕೆ ತರಲಾಗಿದೆ ಎಂಬ ಅಂಶವನ್ನು ಕೃತಜ್ಞತಾಪೂರ್ವಕವಾಗಿ ಸ್ಮರಿಸಿಕೊಳ್ಳುತ್ತೇವೆ. ಈಗ ಪ್ರಮುಖವಾಗಿ ಸಂಘವು ಶ್ರೀಕ್ಷೇತ್ರದ ನಿರಂತರ ನೀರು ಸರಬರಾಜು ಮತ್ತು ಪರಿಸರವನ್ನು ಸ್ವಚ್ಛಗೊಳಿಸುವ ಯೋಜನೆಯನ್ನು ಹಮ್ಮಿಕೊಂಡು ಕಳೆದ ಐದಾರು ವರ್ಷಗಳಿಂದ ಮೊದಲ ಆದ್ಯತೆಯಾಗಿ ಶ್ರೀಕ್ಷೇತ್ರದ ಆವರಣದಲ್ಲಿ ಇರುವ ಸಾರ್ವಜನಿಕ ಶೌಚಾಲಯಗಳ ನಿರ್ವಹಣೆಯನ್ನು ವಹಿಸಿಕೊಳ್ಳಲಾಗಿದೆ. ಈ ಯೋಜನೆ ಯಶಸ್ವಿಯಾಗಲು ಕನಿಷ್ಠ ೫ ಕೋಟಿ ರೂಗಳನ್ನಾದರು ಸಂಗ್ರಹಿಸಿ ಆ ನಿಧಿಯನ್ನು ನಿಶ್ಚಿತ ಠೇವಣಿಯಲ್ಲಿ ತೊಡಗಿಸಿ ಅದರಿಂದ ಬರುವ ಬಡ್ಡಿ ಹಣದಿಂದ ಈ ಯೋಜನೆಯನ್ನು ಪೂರ್ಣಗೊಳಿಸಬೇಕಿದೆ. ನಮ್ಮ ಮನವಿಗೆ ಸ್ಪಂದಿಸಿ ಅನೇಕ ಹಳೆಯ ವಿದ್ಯಾರ್ಥಿಗಳು, ಹಿತೈಷಿಗಳು, ಸದ್ಭಕ್ತರು ಉದಾರವಾಗಿ ಧನಸಹಾಯ ಮಾಡುತ್ತಿದ್ದಾರೆ. ಅವರಿಗೆ ಕೃತಜ್ಞತೆಯನ್ನು ಸಲ್ಲಿಸುತ್ತಾ, ಇದುವರೆಗೆ ೨.೩೫ ಕೋಟಿ ರೂಗಳು ಸಂಗ್ರಹವಾಗಿದೆ ಎಂಬ ಅಂಶವನ್ನು ತಿಳಿಸಲು ಸಂತೋಷಿಸುತ್ತೇವೆ. ಈ ಹಣದಿಂದ ಬರುವ ಬಡ್ಡಿಯಿಂದ ಶ್ರೀಮಠದ ಆವರಣದಲ್ಲಿರುವ ೫ ಶೌಚಾಲಯ ಮತ್ತು ಸ್ನಾನಗೃಹಗಳ ಸಂಕೀರ್ಣದ ಸ್ವಚ್ಛತಾ ಕಾರ್ಯವನ್ನು ಹೊರಗುತ್ತಿಗೆ ಆಧಾರದ ಮೇರೆಗೆ ವಹಿಸಲಾಗಿದೆ.

ಮನಸ್ಸಿಗೆ ಮುದ ನೀಡುವ ವಿಷಯ: ಶ್ರೀಮಠದ ಆವರಣದಲ್ಲಿರುವ ಸಾರ್ವಜನಿಕ ಶೌಚಾಲಯಗಳ ಸ್ವಚ್ಛತೆಯು ಸಮರ್ಪಕವಾಗಿದೆ ಎಂದು ಸಾರ್ವಜನಿಕರ ಮೆಚ್ಚುಗೆಗೆ ಪಾತ್ರವಾಗಿದೆ. ಇನ್ನು ಮುಂದೆ ಈ ಯೋಜನೆಯನ್ನು ವಿದ್ಯಾರ್ಥಿ ನಿಲಯಗಳ ಹಾಗೂ ಮಠದ ಆವರಣದ ಸ್ವಚ್ಛತೆಗೆ ವಿಸ್ತರಿಸಬೇಕಾಗಿದೆ. ಇದಕ್ಕಾಗಿ ತಮ್ಮ ಸಹಾಯ, ಸಹಕಾರಗಳಿಗೆ ಬೇಡಿಕೆ.

ಸರ್ವಸದಸ್ಯರ ಮಹಾಧಿವೇಶನದಲ್ಲಿ ತೆಗೆದುಕೊಂಡ ನಿರ್ಣಯದಂತೆ ಎಲ್ಲಾ ಸದಸ್ಯರು ವರ್ಷಂಪ್ರತಿ ಕನಿಷ್ಠ ೧೦೦೦/- ರೂಗಳಿಗೆ ಕಡಿಮೆ ಇಲ್ಲದಂತೆ ತಪ್ಪದೆ ದೇಣಿಗೆ ನೀಡಿದರೆ ಈ ಯೋಜನೆ ಫಲಕಾರಿಯಾಗುತ್ತದೆ ಈ ಅಂಶವನ್ನು ಪತ್ರಗಳ ಮೂಲಕ ನಿವೇದಿಸಿಕೊಳ್ಳಲಾಗಿದೆ. ತಾವು ಈ ಯೋಜನೆಗೆ ಕಾಯಾ ವಾಚಾ ಮನಸಾ ಕೈಜೋಡಿಸುತ್ತೀರೆಂದು ವಿನಂತಿಸಿಕೊಳ್ಳುತ್ತೇವೆ. ಮತ್ತೊಂದು ಅಂಶವನ್ನು ತಮ್ಮ ಆದ್ಯ ಗಮನಕ್ಕೆ ತರಬಯಸುವುದೇನೆಂದರೆ ಪ್ರತಿಯೊಬ್ಬ ಸದಸ್ಯರು ದಿನಕ್ಕೆ ೧/-ರೂ.ನಂತೆ ಉಳಿಸಿ ತಮ್ಮ ವಯಸ್ಸಿಗನುಗುಣವಾಗಿ ಲೆಕ್ಕಹಾಕಿ ದೇಣಿಗೆ ನೀಡಿದರೆ ಅತ್ಯಲ್ಪ ಅವಧಿಯಲ್ಲಿ ಉಳಿದ ಹಣ ಸಂಗ್ರಹಣೆಯಾಗುತ್ತದೆ. ನೀವು ಉದಾರವಾಗಿ ಧನಸಹಾಯ ಮಾಡಬೇಕಷ್ಟೆ. ಇದನ್ನು ಸಾಕಾರಗೊಳಿಸಬೇಕಾದವರೂ ನೀವೇ ಎಂಬ ಅಂಶವನ್ನು ತಮ್ಮಲ್ಲಿ ಅರಿಕೆಮಾಡಿಕೊಳ್ಳುತ್ತೇವೆ. ತಾವು ನೀಡುವ ದೇಣಿಗೆಯನ್ನು 'ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್' ಹೆಸರಿಗೆ ಚೆಕ್/ಡಿ.ಡಿ./ನಗದು ರೂಪದಲ್ಲಿ ನೀಡಬಹುದು. ತಾವು ನೀಡುವ ಹಣಕ್ಕೆ ಆದಾಯ ತೆರಿಗೆ ಇಲಾಖೆಯಿಂದ ೮೦ಜಿ ಅಡಿಯಲ್ಲಿ ಶೇ. ೫೦ರವರೆಗೂ ತೆರಿಗೆ ವಿನಾಯಿತಿ ಇರುತ್ತದೆ. ಅಂತೆಯೇ ೧೦ ಸಾವಿರಕ್ಕೂ ಮೇಲ್ಪಟ್ಟು ವಂತಿಗೆ ನೀಡುವ ದಾನಿಗಳ ಹೆಸರನ್ನು ಶ್ರೀಮಠದ ಆವರಣದಲ್ಲಿ ಸೂಕ್ತ ನಾಮಫಲಕಗಳಲ್ಲಿ ನಮೂದಿಸಲಾಗುವುದು. ಈ ಅವಕಾಶವನ್ನು ಸದುಪಯೋಗ ಪಡಿಸಿಕೊಳ್ಳುತ್ತೀರೆಂದು ಆಶಿಸುತ್ತೇವೆ.

| ಕೆ.ಎಚ್. ಶಿವರುದ್ರಯ್ಯ | ಡಾ. ಎಂ.ಎನ್. ಚನ್ನಬಸಪ್ಪ |
|---|---|
| ಕಾರ್ಯದರ್ಶಿ | ಪ್ರಧಾನ ಕಾರ್ಯದರ್ಶಿ |

## ಅಭಿನಂದನೆ

ಚಿನ್ನದ ಪದಕ ಪಡೆದ ಶ್ರೀಮಠದ ವಿದ್ಯಾರ್ಥಿ
ಶ್ರೀ ಜಿ.ಆರ್. ಸಿದ್ಧಲಿಂಗಸ್ವಾಮಿ

ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯವು ದಿನಾಂಕ: ೧೫-೦೨-೨೦೧೭ರಂದು 'ಪಂಚಮ ಘಟಿಕೋತ್ಸವ'ವನ್ನು ನಡೆಸಿದ್ದು, ಆ ಘಟಿಕೋತ್ಸವದಲ್ಲಿ ಶ್ರೀ ಸಿದ್ಧಲಿಂಗೇಶ್ವರ ವೇದ-ಸಂಸ್ಕೃತ ಕಾಲೇಜಿನ ಶಕ್ತಿವಿಶಿಷ್ಟಾದ್ವೈತ ವೇದಾಂತಶಾಸ್ತ್ರ ವಿಭಾಗದಲ್ಲಿ ಎಂ.ಎ. ವಿದ್ಯಾರ್ಥಿಯಾಗಿದ್ದ ಶ್ರೀ ಜಿ.ಆರ್. ಸಿದ್ಧಲಿಂಗಸ್ವಾಮಿ ಅವರು ಚಿನ್ನದ ಪದಕ ಪಡೆದ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ. ಈ ಶುಭ ಸಂದರ್ಭದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರು ವಿದ್ಯಾರ್ಥಿಯನ್ನು ಸನ್ಮಾನಿಸಿ ಆಶೀರ್ವದಿಸಿದರು. ಈ ಸಂದರ್ಭದಲ್ಲಿ ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಜಿ.ಸಿ. ರಾಜಶೇಖರಯ್ಯನವರು, ಸಂಸ್ಕೃತ ವಿಭಾಗದ ವಿದ್ಯಾಧಿಕಾರಿಗಳಾದ ಶ್ರೀ ಪಿ.ಎನ್. ಚಂದ್ರಶೇಖರಯ್ಯನವರು, ಶಕ್ತಿವಿಶಿಷ್ಟಾದ್ವೈತ ವೇದಾಂತ ಶಾಸ್ತ್ರದ ಪ್ರಾಧ್ಯಾಪಕರಾದ ಶ್ರೀ ಗುರುಪ್ರಸಾದ್ ಹಾಗೂ ಕಾಲೇಜಿನ ಇತರೆ ಬೋಧಕವರ್ಗದವರು ಉಪಸ್ಥಿತರಿದ್ದರು. ಸಿದ್ಧಗಂಗಾ ಮಾಸಪತ್ರಿಕಾ ಬಳಗ ವಿದ್ಯಾರ್ಥಿಯನ್ನು ಅಭಿನಂದಿಸುತ್ತದೆ ಹಾಗೂ ಭವಿಷ್ಯ ಉಜ್ವಲವಾಗಲೆಂದು ಹಾರೈಸುತ್ತದೆ.

## STATEMENT OF OWNERSHIP
## PARTICULARS ABOUT 'SIDDAGANGA'

FORM IV (See Rule 5)

| | | |
|---|---|---|
| Place of Publication | : | **SIDDAGANGA (Regd.)**<br>Siddaganga Math.<br>Tumkur District - 572 104. Karanataka. |
| Periodicity of its Publication | : | **Monthly** |
| Printer's Name | : | **Sree Sree Shivakumara Swamigalu** |
| Whether Citizen of India | : | Indian |
| Address | : | **Sree Siddalingeshwara Swamy Offset Printing Press,**<br>Sree Siddaganga Math,<br>Tumkur District - 572 104. |
| Publisher's Name | : | **Dr. M.N. Chennabasappa** |
| Whether Citizen of India | : | Indian |
| Address | : | **Publisher**<br>Old Students Association,<br>Sree Siddaganga Math,<br>Tumkur District - 572 104.<br>Ph : 0816-2282322 |
| Editor's name | : | **H.V. Veerabhadraiah** |
| Nationality | : | Indian |
| Address | : | **Editor,** 'Siddaganga'<br>Sree Siddaganga Math,<br>Tumkur District - 572 104. Karnataka. |

I, Dr. M.N. Chennabasappa hereby declare that the particulars given above are true to the best of my knowledge and belief.

Sd/-
**Dr. M.N. Chennabasappa**
Principal Secretary
Old Students Association
Signature of Publisher

Bangalore
Date : 1-3-2017

ಶ್ರೀ ಸಿದ್ಧಗಂಗಾ ಮಠ, ತುಮಕೂರು

## ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ

ತಾವು ನೀಡುವ ಹಣಕ್ಕೆ ಆದಾಯ ತೆರಿಗೆ ಇಲಾಖೆಯಿಂದ ೮೦ಜಿ ಅಡಿಯಲ್ಲಿ ಶೇ. ೫೦ರವರೆಗೆ ತೆರಿಗೆ ವಿನಾಯಿತಿ ಇರುತ್ತದೆ.

| ಕ್ರ.ಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| 1509. | ಶ್ರೀ ಕೆ.ಎಸ್. ಸದಾಶಿವಯ್ಯ<br>ತುಮಕೂರು | 1,000.00 |
| 1510. | ಶ್ರೀ ಪಿ. ಶಂಕರಪ್ಪ<br>ಬೆಂಗಳೂರು | 10,010.00 |
| 1511. | ಶ್ರೀ ಕೆ.ಎಂ. ಲೋಕೇಶ್<br>ಬೆಂಗಳೂರು | 11,101.00 |
| 1512. | ಶ್ರೀ ಎಂ.ಹೆಚ್. ಬಸವರಾಜು<br>ಬೆಂಗಳೂರು | 2,001.00 |
| 1513. | ಶ್ರೀ ಒ.ಎಸ್. ತಿಪ್ಪೇಸ್ವಾಮಿ<br>ಬೆಂಗಳೂರು | 1,001.00 |
| 1514. | ಶ್ರೀ ಎಸ್. ಕುಮಾರ್<br>ತುಮಕೂರು | 5,001.00 |
| 1515. | ಶ್ರೀ ಡಿ. ಗಂಗಾಧರಯ್ಯ ತೇಜ್ ಪ್ರಿಂಟರ್ಸ್<br>ಬೆಂಗಳೂರು | 25,001.00 |
| 1516. | ಶ್ರೀ ಎಸ್.ಆರ್. ರೇಣುಕಾರಾಧ್ಯ<br>ಬೆಂಗಳೂರು | 1,000.00 |
| 1517. | ಶ್ರೀ ಸಿ. ಶಿವರುದ್ರಯ್ಯ<br>ಬೆಂಗಳೂರು | 1,001.00 |
| 1518. | ಶ್ರೀ ಸಿ.ಎಸ್. ರಾಜಶೇಖರಯ್ಯ<br>ಬೆಂಗಳೂರು | 1,001.00 |
| 1519. | ಶ್ರೀ ಎಂ.ಆರ್. ಶಿವಣ್ಣ<br>ಬೆಂಗಳೂರು | 1,00,101.00 |
| 1520. | ಶ್ರೀ ವಿ.ಎನ್. ಶಿವಣ್ಣ<br>ಬೆಂಗಳೂರು | 1,001.00 |
| 1521. | ಶ್ರೀ ಎನ್.ವಿ. ಕೃಷ್ಣಮೂರ್ತಿ<br>ಬೆಂಗಳೂರು | 10,000.00 |
| 1522. | ಶ್ರೀಮತಿ ನಾಗರತ್ನ ಮಹಂತೇಶ ಪಟ್ಟಣಶೆಟ್ಟಿ<br>ಗಂಗಾವತಿ | 1,001.00 |
| 1523. | ಶ್ರೀ ಎಸ್. ಬಸವರಾಜಯ್ಯ<br>ಬೆಂಗಳೂರು | 21,100.00 |
| 1524. | ಶ್ರೀ ಎಸ್. ಚನ್ನವೀರದೇವರು<br>ಬೆಂಗಳೂರು | 10,000.00 |
| 1525. | ಶ್ರೀ ಕೆ.ವಿ. ವೀರಣ್ಣ<br>ಬೆಂಗಳೂರು | 10,000.00 |
| 1526. | ಶ್ರೀ ವೈ. ವೆಂಕಟೇಶ್<br>ಬೆಂಗಳೂರು | 10,000.00 |
| 1527. | ಶ್ರೀ ಕೆ.ಹೆಚ್. ಜಯರಾಮಪ್ಪ<br>ತುಮಕೂರು | 10,233.00 |
| 1528. | ಶ್ರೀ ಹೆಚ್.ವಿ. ರಾಜಣ್ಣ<br>ಬೆಂಗಳೂರು | 1,000.00 |
| 1529. | ಶ್ರೀ ಕೆ.ಬಿ. ಸುಜ್ಞಾನಮೂರ್ತಿ<br>ಕುಂಬಿಗನಹಳ್ಳಿ | 10,000.00 |
| 1530. | ಡಾ॥ ಎಸ್. ಶಿವರಾಜಪ್ಪ<br>ಮೈಸೂರು | 9,000.00 |
| 1531. | ಶ್ರೀ ವೀರಕ್ಯಾತಯ್ಯ<br>ಬೆಂಗಳೂರು | 36,500.00 |
| 1532. | ಶ್ರೀ ಶಿವಕುಮಾರ್<br>ಬೆಂಗಳೂರು | 25,126.00 |
| 1533. | ಶ್ರೀ ಟಿ.ಎನ್. ಮೈಲಾರಪ್ಪ<br>ಬೆಂಗಳೂರು | 1,000.00 |
| 1534. | ಶ್ರೀ ಟಿ.ಎನ್. ತಿಮ್ಮಪ್ಪ<br>ಬೆಂಗಳೂರು | 1,000.00 |
| 1535. | ಶ್ರೀ ಮಲ್ಲಿಕಾರ್ಜುನ ಅರಸ್<br>ರಾಮನಗರ | 2,002.00 |
| 1536. | ಶ್ರೀ ವಿ.ಸಿ. ಪರಮಶಿವಯ್ಯ<br>ಬೆಂಗಳೂರು | 1,000.00 |
| 1537. | ಶ್ರೀಮತಿ ವೈ.ಎಸ್. ಪವಿತ್ರ<br>ಯಡೇಹಳ್ಳಿ | 1,000.00 |
| 1538. | ಶ್ರೀ ಜಿ. ಹೊನ್ನಗಂಗಯ್ಯ<br>ವೀರಾಪುರ | 1,000.00 |
| 1539. | ಶ್ರೀ ಕೆ.ಸಿ. ಚಿಕ್ಕಣ್ಣ<br>ಕೋಳಾಲ | 1,000.00 |
| 1540. | ಶ್ರೀ ಕೆ.ಪಿ. ಗಂಗಾಧರಯ್ಯ<br>ಕನಕಪುರ | 1,001.00 |
| 1541. | ಶ್ರೀ ಆರ್. ದೊಡ್ಡಬಸಪ್ಪ<br>ಕರೂರು | 1,001.00 |
| 1542. | ಶ್ರೀ ಗಿಣ್ಣಪ್ಪನವರ ಮಲ್ಲಪ್ಪ<br>ಕರೂರು | 1,001.00 |

(ಮುಂದುವರೆಯುತ್ತದೆ)



ಆಗ್ನೇಯ ಶಿಕ್ಷಕರ ಕ್ಷೇತ್ರದಿಂದ ನಡೆದ ಚುನಾವಣೆಯಲ್ಲಿ ಜಯಶೀಲರಾದ ಜೆ.ಡಿ.ಎಸ್. ಅಭ್ಯರ್ಥಿ ಶ್ರೀ ರಮೇಶ್‌ಬಾಬು ಅವರು ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀ ಶ್ರೀಗಳವರಿಂದ ದಿವ್ಯಾಶೀರ್ವಾದ ಪಡೆದರು.



ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ ಚೀಫ್ ಜನರಲ್ ಮ್ಯಾನೇಜರ್ ಶ್ರೀ ಶಿವಾನಾಯ್ನರ್ ಅವರು ಶ್ರೀಮಠಕ್ಕೆ ಭೇಟಿ ನೀಡಿ ಪೂಜ್ಯ ಶ್ರೀಗಳವರ ದರ್ಶನ ಮಾಡಿ ಆಶೀರ್ವಾದ ಪಡೆದರು. ಈ ಸಂದರ್ಭದಲ್ಲಿ ಬ್ಯಾಂಕ್ ಅಧಿಕಾರಿಗಳಾದ ಶ್ರೀ ಸುರೇಶ್ ಎಸ್. ಸಾವೇಕರ್, ಶ್ರೀ ಎಲ್. ಶೇಖರ್, ಶ್ರೀ ಜ್ಯೋತಿ ಗಣೇಶ್ ಅವರು ಉಪಸ್ಥಿತರಿದ್ದರು.



ಶ್ರೀ ಸಿದ್ಧಲಿಂಗೇಶ್ವರ ವೇದ-ಸಂಸ್ಕೃತ ಕಾಲೇಜಿನ ಶಕ್ತಿ-ವಿಶಿಷ್ಟಾದ್ವೈತಶಾಸ್ತ್ರ ವಿಭಾಗದ ಎಂ.ಎ. ವಿದ್ಯಾರ್ಥಿ ಶ್ರೀ ಜಿ.ಆರ್. ಸಿದ್ಧಲಿಂಗಸ್ವಾಮಿ ಅವರು ಚಿನ್ನದ ಪದಕ ಪಡೆದ ಸಂದರ್ಭದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರು ಸನ್ಮಾನಿಸಿ, ಆಶೀರ್ವದಿಸಿದರು. ಈ ಸಂದರ್ಭದಲ್ಲಿ ಪ್ರಾಂಶುಪಾಲರಾದ ಶ್ರೀ ಜಿ.ಸಿ ರಾಜಶೇಖರಯ್ಯ, ಶ್ರೀ ಪಿ.ಎನ್. ಚಂದ್ರಶೇಖರಯ್ಯ, ಶ್ರೀ ಗುರುಪ್ರಸಾದ್ ಮೊದಲಾದವರು ಉಪಸ್ಥಿತರಿದ್ದರು.



ಶ್ರೀ ಸಿದ್ಧಗಂಗಾ ಮಹಿಳಾ ಪದವಿಪೂರ್ವ ಕಾಲೇಜಿನಲ್ಲಿ ಏರ್ಪಡಿಸಲಾಗಿದ್ದ ಸಂಸ್ಕೃತಿ ಹಬ್ಬದ ವಾರ್ಷಿಕ ಚಟುವಟಿಕೆಗಳ ಸಮಾರೋಪ ಸಮಾರಂಭದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು, ವಿಜ್ಞಾನಿ ಡಾ. ಎಸ್.ಎಂ. ಓಂಕಾರ್, ಪ್ರೊ. ಜಿ.ಎಸ್. ರೇಣುಕಪ್ಪ, ಕಿರಿತೆರೆ ನಟಿ ಚಂದ್ರಕಲಾ ಮೋಹನ್, ಡಾ. ಡಿ.ಎನ್. ಯೋಗೀಶ್ ಮೊದಲಾದವರು ಉಪಸ್ಥಿತರಿದ್ದರು.



ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಜಾತ್ರೆಯ ಅಂಗವಾಗಿ ಧಾನ್ಯ ಸಂಗ್ರಹಿಸಲು ಎ.ಪಿ.ಎಂ.ಸಿ.ಗೆ ಆಗಮಿಸಿದಾಗ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರಿಗೆ ಎ.ಪಿ.ಎಂ.ಸಿ. ಕಾರ್ಯದರ್ಶಿ ಹಾಗೂ ಸಿಬ್ಬಂದಿ ವರ್ಗದವರು ಪಾದಪೂಜೆ ನೆರವೇರಿಸಿ ಭಕ್ತಿ ಸಮರ್ಪಿಸಿದರು.



ಮಾಗಡಿ ತಾ॥ ಬ್ಯಾಡರಹಳ್ಳಿಯಲ್ಲಿ ಏರ್ಪಡಿಸಲಾಗಿದ್ದ ಶ್ರೀ ಬಸವೇಶ್ವರ ದೇವಾಲಯದ ಗೋಪುರ, ಕಳಸ ಪ್ರತಿಷ್ಠಾಪನೆ ಹಾಗೂ ಶ್ರೀ ಮಹದೇಶ್ವರ ದೇವಾಲಯದ ಪುನರ್ ಪ್ರತಿಷ್ಠಾಪನ ಸಮಾರಂಭದ ಉದ್ಘಾಟನೆಗೆ ಆಗಮಿಸಿದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರನ್ನು ಮೆರವಣಿಗೆ ಮೂಲಕ ಬರಮಾಡಿಕೊಳ್ಳಲಾಯಿತು. ಶ್ರೀ ಕಂಚುಗಲ್ ಬಂಡೇಮಠದ ಶ್ರೀಗಳವರು ಉಪಸ್ಥಿತರಿದ್ದರು.

email ID : geetanjaligraphics@gmail.com